ಕರ್ನಾಟಕ

Vol - 11 December 2012 Issue No. 11 ₹ 5.00/-

# ಸ್ಕಾಟ್ ಮತ್ತು ಗೈಡ್ ವಾರ್ತಾಪತ್ರಿಕೆ

# Karnataka Scout & Guide

*News Magazine*

*National Youth Day*

12 | 01 | 13








M.A. Khalid, State Secretary, receiving the Asia Pacific Region Award for Distinguished Service, Highest Regional Scouting Award, from His Excellency Mr. Jejomar C Binay, Vice President of Philippines & Chairman of Asia-Pacific Regional Scout Committee during the Asia Pacific Regional Conference held at Bangladesh on 29th November 2012.



Sri Kondajji B. Shanmukhappa, State Chief Commissioner, e Bharat Scouts & Guides Karnataka Presenting Letter of request to r. Hansraj Bharadwaj, His Excellency the Governor of Karnataka and atron of the Bharat Scouts & Guides Karnataka inviting His Excellency to Present the Rajya Puraskar Awards to the Scouts & Guides during the Month of February 2013.

ri T.S. Lucas, State Commissioner (S), Sri T. Prabhakar, State Treasurer, Sri M.A. Chellaiah, Smt. B.V. Ramalatha, Joint State Secretaries & Smt. Janaki Venugopal Sri T.A. Manjunathachar, State Organising Commissioners are seen.




**Dr. Hansraj Bhardwaj, His Excellency the Governor of Karnataka is seen with the Rare Wedding Photograph of Lord Baden Powell and Lady Baden Powell. Office Bearers & Officials of State Headquarters are seen.**



ದಿ. 15-12-201 ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ ನಡೆದ ಆಯುಕ್ತರುಗಳ ಮತ್ತು ಕಾರ್ಯದರ್ಶಿಗಳ ಸಮಾವೇಶದ ಸಂದರ್ಭದಲ್ಲಿ ಏಶಿಯ ಪೆಸಿಪಿಕ್ ವಲಯದ ಉನ್ನತ ಪ್ರಶಸ್ತಿ ಗಳಿಸಿದ ರಾಜ್ಯ ಕಾರ್ಯದರ್ಶಿ ಶ್ರೀ ಎಂ.ಎ. ಖಾಲೀದ್‌ರವರನ್ನು ಸನ್ಮಾನಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಹಾಗೂ ಇತರ ಪದಾಧಿಕಾರಿಗಳನ್ನು ಕಾಣಬಹುದು. ಇದೇ ಸಂದರ್ಭದಲ್ಲಿ ಸಂಸ್ಥೆಯ ಗೈಡ್ ವಿಭಾಗದಲ್ಲಿ ವ್ಯವಸ್ಥಾಪಕಿಯಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದುತ್ತಿರುವ ಶ್ರೀಮತಿ ಕೆ.ಎನ್. ಪ್ರೇಮಕುಮಾರಿಯವರನ್ನು ಸನ್ಮಾನಿಸಲಾಯಿತು.



ಸಮಾವೇಶದಲ್ಲಿ ಭಾಗವಹಿಸಿದ ವಿವಿಧ ಜಿಲ್ಲೆಯ ಆಯುಕ್ತರುಗಳು ಹಾಗೂ ಕಾರ್ಯದರ್ಶಿಗಳ ವಿಹಂಗಮ ನೋಟ.

# *Editor's Desk.......*

*"**Scouting – bridging the gaps**" was the theme of 24th APR Scout Conference held in Bangladesh during November 2012. How well the theme has been conceived and if we start implementing the same in practice , surely we will be messengers of peace as Scouts/Guides all over the globe.*

*Friends some time's it is very easy to deliver the dialogues than showing the same in actions. Still strongly I feel if we have a commitment to do our best for the sake of what we love we can do it. Scout / Guide movement is such a great union of young people all around the globe and we are here because we love the movement. When we have such addiction to the movement why we are not ready to change ourselves and start building bridges. The bridges to un reached youth/ the groups who are ready to support/ the individuals who will be assets / the communities where we are needed most has to be build and serve the purpose only for spreading and promoting the great movement.*

*On the other side, the bridges are also essential in bringing peace / progress / prosperity among the needy / war zones/ criminalized / weaker sections and we as a adult Scouts/ Guides can play a vital role.*

*Overall building bridges to close the gaps and coming / bringing together the youth is very important. These things cannot be delivered through dialogues but should be delivered in actions. The dialogues become necessary where there is a hope, so before we start closing the gaps let's build bridges of hope and then we can convert the hopes in to actions.*

*In our Organisation it is very much needed especially among the adults. The differences of ego/ opinions/ ideas have to be diluted and strong stream of oneness has to emerge. This is possible when we decide and let's make it practically possible with our actions of bridging the gaps. Then the reflection of our bridges can be mirrored among the youth.*

M.A. KHALID
Editor

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

## ನೂತನ ವರ್ಷ 2013 ಹಾಗು ಸಂಕ್ರಾಂತಿಯ ಹಾರ್ದಿಕ ಶುಭಾಶಯಗಳು

ಆತ್ಮೀಯರೆ,

ಡಿಸೆಂಬರ್ 25 ರಂದು ಪ್ರಪಂಚದಾದ್ಯಂತ ಸಂತೋಷ – ಸಡಗರ ಸಂಭ್ರಮಗಳಿಂದ ಕ್ರಿಸ್‌ಮಸ್ ಹಬ್ಬವನ್ನು ಆಚರಿಸಲಾಗಿದೆ. 2012 ವರ್ಷ ಮುಗಿದು ನೂತನ ಸಂವತ್ಸರಕ್ಕೆ ಕಾಲಿಡುತ್ತಿದ್ದೇವೆ. 2012 ರಲ್ಲಿ ಸ್ಥಳೀಯ–ಜಿಲ್ಲೆಗಳ–ಹಾಗೂ ರಾಜ್ಯ ಮಟ್ಟದಲ್ಲಿ ಹಲವಾರು ಕಾರ್ಯಕ್ರಮಗಳು–ತರಬೇತಿಗಳು ಈಗಾಗಲೇ ಜರುಗಿದ್ದು – ಜನವರಿ ಹಾಗೂ ಫೆಬ್ರವರಿ 2013 ರ ತಿಂಗಳುಗಳಲ್ಲಿ ರಾಜ್ಯ ಸಂಸ್ಥೆಯು ಕೆಳಕಂಡ ಕಾರ್ಯಕ್ರಮಗಳನ್ನು ಆಯೋಜಿಸಿದೆ. ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ದಿನಾಂಕ 18 ಜನವರಿಯಿಂದ 22 ರ ವರೆಗೆ 35ನೇ ರಾಜ್ಯ ಮಟ್ಟದ ಕಬ್, ಬುಲ್ ಬುಲ್ ಉತ್ಸವ ಏರ್ಪಡಿಸಿದ್ದು ರಾಜ್ಯದಾದ್ಯಂತ 700 ಕಬ್ಸ್ ಬುಲ್ ಬುಲ್ಸ್‌ಗಳು ಹಾಗು ದಳನಾಯಕ–ನಾಯಕಿಯರು ಭಾಗವಹಿಸುತ್ತಾರೆ. ದಿನಾಂಕ 11 ಜನವರಿಯಿಂದ 13 ರ ವರೆವಿಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರದಲ್ಲಿ ರಾಜ್ಯ ಮಟ್ಟದ ಮುಕ್ತದಳಗಳ ರ್‍ಯಾಲಿಯನ್ನು ಏರ್ಪಡಿಸಿದ್ದು 400ಕ್ಕೂ ಹೆಚ್ಚು ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್‌ಗಳು ಹಾಗೂ ದಳನಾಯಕ–ನಾಯಕಿಯರು ಭಾಗವಹಿಸಲಿದ್ದಾರೆ.

**ಕರ್ನಾಟಕದಲ್ಲಿ ಸ್ಕೌಟ್ಸ್ – ಗೈಡ್ಸ್ ಚಳವಳಿಯಲ್ಲಿ ಕಾರ್ಯಕರ್ತರುಗಳಾಗಿ, ದಳಗಳ ನಾಯಕ ನಾಯಕಿಯರುಗಳಾಗಿ–ಸ್ಥಳೀಯ –ಜಿಲ್ಲೆಗಳ – ಹಾಗೂ ರಾಜ್ಯ ಮಟ್ಟದಲ್ಲಿ ಸಕ್ರಿಯವಾಗಿ ನಿಸ್ವಾರ್ಥದಿಂದ ಅನುಪಮ ಸೇವೆಯನ್ನು ದಶಕಗಳಿಂದ ಸಲ್ಲಿಸುತ್ತಿರುವ ಸಹಸ್ರಾರು ಸಹೋದ್ಯೋಗಿಗಳಿಗೆ ನೂತನ ವರ್ಷ 2013 ರಲ್ಲಿ ಸಂತೋಷ–ಸಂತೃಪ್ತಿ–ಸಮಾಧಾನ–ನೆಮ್ಮದಿ ಉಂಟಾಗಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.**

ದಿನಾಂಕ 3 ಮತ್ತು 4 ಡಿಸೆಂಬರ್ ರಂದು ಬೆಂಗಳೂರಿನ ಶಾಂತಿಗೃಹ ತರಬೇತಿ ಕೇಂದ್ರದಲ್ಲಿ ರಾಜ್ಯದ ಎಲ್ಲಾ ಎ.ಎಸ್.ಓ.ಸಿ., ಡಿ.ಓ.ಸಿ., ಹಾಗೂ ಡಿ.ಓ. ಗಳ ಸಭೆಯನ್ನು ಕರೆದು ಎರಡು ದಿವಸಗಳ ಕಾಲ ಹಲವಾರು ಪ್ರಮುಖ ವಿಷಯಗಳ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿ, ಈ ವರ್ಷದಲ್ಲಿ ಜಿಲ್ಲೆಯಲ್ಲಿ ಇದುವರೆವಿಗೆ ಜರುಗಿರುವ ಚಟುವಟಿಕೆಗಳು – ಕಾರ್ಯಕ್ರಮಗಳು, ರ್‍ಯಾಲಿಗಳು ಹಾಗು ತರಬೇತಿಗಳ ಬಗ್ಗೆ ವಿಚಾರವಿನಿಮಯ ಮಾಡಲಾಯಿತು.

ನಾನು ಸಹ ಡಿಸೆಂಬರ್ 3 ರ ಸಭೆಯಲ್ಲಿ ಭಾಗವಹಿಸಿ–ಎಲ್ಲರೊಂದಿಗೆ ವಿಚಾರವಿನಿಮಯ ಮಾಡಿ – ತಕ್ಷಣ ಜಿಲ್ಲೆಗಳ ಕಾರ್ಯಯೋಜನೆಯನ್ನು ಡಿಸೆಂಬರ್ – ಜನವರಿ– ಫೆಬ್ರವರಿ ತಿಂಗಳುಗಳಲ್ಲಿ ಪೂರೈಸುವಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಳ್ಳಬೇಕೆಂದು ಸೂಚಿಸಿದ್ದೇನೆ. ಇದಕ್ಕೆ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಗಿದೆ.

**1) ಮೂಲ ತರಬೇತಿ ಶಿಬಿರಗಳನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಪ್ರತಿವರ್ಷ ಯೋಜಿಸಬೇಕು.**

**2) ಪ್ರತಿ ತಾಲ್ಲೂಕು ಹಾಗು ಜಿಲ್ಲಾ ಕೇಂದ್ರಗಳಲ್ಲಿ ಪ್ರತಿವರ್ಷ ಸ್ಥಳೀಯ ಹಾಗೂ ಜಿಲ್ಲಾ ರ್‍ಯಾಲಿಗಳನ್ನು ಏರ್ಪಡಿಸಬೇಕು.**

**3) ಪ್ರತಿವರ್ಷ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಏರ್ಪಡಿಸಬೇಕು**

**4) ಬೇಸಿಕ್ ತರಬೇತಿ ಆದವರುಗಳಿಗೆ ಮುಂದುವರೆದ ತರಬೇತಿ ಕೊಡಿಸಬೇಕು.**

**5) ಮುಂದುವರೆದ ತರಬೇತಿ ಪಡೆದವರುಗಳಿಗೆ ಕನಿಷ್ಟ ಹೆಚ್.ಡಬ್ಲ್ಯೂ.ಬಿ. ತರಬೇತಿ ಪಡೆಯಲು ಮಾರ್ಗದರ್ಶನ ಮಾಡಬೇಕು.**

**6) ರಾಜ್ಯ ಸಂಸ್ಥೆ ಹಾಗೂ ರಾಷ್ಟ್ರೀಯ ಸಂಸ್ಥೆಯವರು ಏರ್ಪಡಿಸುವ ತರಬೇತಿಗಳು- ಕಾರ್ಯಕ್ರಮಗಳಲ್ಲಿ ಎಲ್ಲಾ ಜಿಲ್ಲೆಗಳೂ ಸಕ್ರಿಯವಾಗಿ ಭಾಗವಹಿಸಬೇಕು.**

**ಇದಲ್ಲದೆ ಪ್ರತಿವರ್ಷ ನವೆಂಬರ್ 7 ರಂದು ರಾಷ್ಟ್ರದೆಲ್ಲೆಡೆ ಆಚರಿಸುತ್ತಿರುವ "ಸಂಸ್ಥಾಪನ ದಿನ ಹಾಗೂ ಧ್ವಜ ದಿನಾಚರಣೆ" ಕಾರ್ಯಕ್ರಮವನ್ನು ಆಚರಿಸುವುದರೊಂದಿಗೆ, ರಾಷ್ಟ್ರೀಯ ಸಂಸ್ಥೆಯವರು ಪ್ರತಿವರ್ಷ ಬಿಡುಗಡೆಗೊಳಿಸುತ್ತಿರುವ "ಧ್ವಜ ಚೀಟಿ"ಗಳನ್ನು ಎಲ್ಲಾ ಹಂತಗಳಲ್ಲಿ ಬಿಡುಗಡೆಗೊಳಿಸುವುದು ನಮ್ಮಗಳ ಕರ್ತವ್ಯ ಮತ್ತು ಜವಾಬ್ದಾರಿಯಾಗಿದೆ. ಈ ಬಗ್ಗೆಯೂ ಎಲ್ಲಾ ಜಿಲ್ಲಾ ಸಂಸ್ಥೆಗಳೂ ಸೂಕ್ತಕ್ರಮ ತೆಗೆದುಕೊಳ್ಳಲು ಕೋರಿರುತ್ತೇನೆ.**

ದಿನಾಂಕ 15 ಡಿಸೆಂಬರ್ ರಂದು ರಾಜ್ಯ ಮಟ್ಟದ ಆಯುಕ್ತರುಗಳ ಹಾಗು ಕಾರ್ಯದರ್ಶಿಗಳ ಸಮಾವೇಶ ಹಾಗು ಅಂದು ಸಂಜೆ ರಾಜ್ಯಯೋಜನಾ ಸಭೆ ಜರುಗಿತು. ಈ ಸಮಾವೇಶದಲ್ಲಿ ಎರಡು ಪ್ರಮುಖ ಅಭಿನಂದನಾ ಕಾರ್ಯಕ್ರಮಗಳು ಜರುಗಿದವು.

ರಾಜ್ಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಎಂ.ಎ. ಖಾಲಿದ್ ಅವರಿಗೆ ದಿನಾಂಕ 29 ನವೆಂಬರ್ ರಂದು ಬಾಂಗ್ಲಾದೇಶದಲ್ಲಿ ಜರುಗಿದ ಏಶಿಯಾ ಪೆಸಿಫಿಕ್ ಪ್ರಾದೇಶಿಕ ಸಮಾವೇಶದಲ್ಲಿ ಶ್ರೀ ಖಾಲಿದ್ ಅವರು ಚಳವಳಿಗೆ ಸಲ್ಲಿಸಿದ ವಿಶಿಷ್ಠ ಸೇವೆಯನ್ನು ಪರಿಗಣಿಸಿ **"ಏಶಿಯಾ ಪೆಸಿಫಿಕ್ ಪ್ರಾದೇಶಿಕ ಸಂಸ್ಥೆಯು ನೀಡುವ ಅತ್ಯುನ್ನತ ಪ್ರಶಸ್ತಿಯನ್ನು"** ಪಡೆದಿರುವುದಕ್ಕೆ ರಾಜ್ಯ ಸಂಸ್ಥೆಯ ಹಾಗು ಜಿಲ್ಲಾ ಸಂಸ್ಥೆಗಳ ಆಯುಕ್ತರುಗಳ ಹಾಗು ಕಾರ್ಯದರ್ಶಿಗಳ ಸಮ್ಮುಖದಲ್ಲಿ ನಾನು ಶಾಲು ಹಾಗೂ ಫಲಪುಷ್ಪಗಳನ್ನು ನೀಡಿ ಗೌರವಿಸಿರುತ್ತೇನೆ. ಈ ಪ್ರಶಸ್ತಿ ಭಾರತದಲ್ಲಿ ಇದುವರೆವಿಗೆ ಇಬ್ಬರು ರಾಷ್ಟ್ರೀಯ ನಾಯಕರುಗಳಿಗೆ ನೀಡಿದ್ದು – ಶ್ರೀ ಎಂ.ಎ. ಖಾಲಿದ್ ಮೂರನೆಯವರಾಗಿದ್ದಾರೆ. ಸಭೆಯಲ್ಲಿ ಭಾಗವಹಿಸಿದವರೆಲ್ಲರೂ ಶ್ರೀ ಖಾಲಿದ್ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದರು.

ಇದೇ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯ ಗೈಡ್ ವಿಭಾಗದಲ್ಲಿ 36 ವರ್ಷಗಳ ಕಾಲ ಪ್ರಾಮಾಣಿಕಸೇವೆ ಸಲ್ಲಿಸಿ ಈ ತಿಂಗಳ 31 ರಂದು ನಿವೃತ್ತಿ ಹೊಂದಲಿರುವ ವ್ಯವಸ್ಥಾಪಕಿ ಶ್ರೀಮತಿ ಕೆ.ಎನ್. ಪ್ರೇಮಕುಮಾರಿ ಅವರನ್ನು ಸಹ ಶಾಲು ಹಾಗು ಫಲಪುಷ್ಪಗಳನ್ನು ನೀಡಿ ಗೌರವಿಸಲಾಯಿತು. ಶ್ರೀ ಖಾಲಿದ್ ಹಾಗು ಶ್ರೀಮತಿ ಪ್ರೇಮಕುಮಾರಿ ಅವರುಗಳು ತಮಗೆ ನೀಡಿದ ಗೌರವ ಹಾಗು ಪ್ರೀತಿ ವಿಶ್ವಾಸಗಳಿಗೆ ಎಲ್ಲರಿಗೂ ಕೃತಜ್ಞತೆ ಸಲ್ಲಿಸಿದರು.

ಈ ಸಮಾವೇಶದಲ್ಲಿ 26 ಜಿಲ್ಲೆಗಳಿಂದ 60 ಪ್ರತಿನಿಧಿಗಳು ಸಕ್ರಿಯವಾಗಿ ಭಾಗವಹಿಸಿ – ತಮ್ಮ ಜಿಲ್ಲೆಗಳ ಕಾರ್ಯಕ್ರಮಗಳ ಪ್ರಗತಿಯನ್ನು ವಿವರವಾಗಿ ಸಭೆಯ ಗಮನಕ್ಕೆ ತಂದಿರುತ್ತಾರೆ. ಭಾಗವಹಿಸಿದ ಎಲ್ಲಾ ಪ್ರತಿನಿಧಿಗಳು 2012–13ಕ್ಕೆ ರಾಜ್ಯ ಸಂಸ್ಥೆ ಜಿಲ್ಲೆಗೆ ನೀಡಿರುವ ದಳ–ಘಟಕಗಳ ಅಂಕಿಅಂಶ–ಈಗಾಗಲೇ ಜಿಲ್ಲೆಗಳಲ್ಲಿ ಜರುಗಿರುವ ತರಬೇತಿ ಕಾರ್ಯಕ್ರಮಗಳ ವಿವರಗಳು ಹಾಗು ಡಿಸೆಂಬರ್ – ಜನವರಿ – ಫೆಬ್ರವರಿಯಲ್ಲಿ ಹಮ್ಮಿಕೊಂಡಿರುವ ಚಟುವಟಿಕೆಗಳು ಹಾಗೂ ಮೂಲತರಬೇತಿ ಶಿಬಿರಗಳ ವಿವರಗಳನ್ನು ಸಭೆಯ ಗಮನಕ್ಕೆ ತಂದಿರುತ್ತಾರೆ.

ಇದಲ್ಲದೆ– ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಈಗಾಗಲೇ ಲಭ್ಯವಿರುವ ವೃಕ್ಷಮಣಿಧಾರಿಗಳು– ಪ್ರೀ ಎ.ಎಲ್.ಟಿ.ಗಳು ಎ.ಎಲ್.ಟಿ.ಗಳು ಹಾಗೂ ಎಲ್.ಟಿ.ಗಳ ಬಗ್ಗೆ ಗೌರವ ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಸಿ.ಎಸ್. ರೆಡ್ಡಿ ಹಾಗು ಗೈಡ್ ತರಬೇತಿ ಆಯುಕ್ತೆ, ಶ್ರೀಮತಿ ಲೀಲಾ ಸಂಕ್ಷಿಪ್ತವಾಗಿ ವಿವರಗಳನ್ನು ನೀಡಿ ಜಿಲ್ಲೆಗಳಲ್ಲಿ ಸ್ಕೌಟ್ಸ್–ಗೈಡ್ಸ್ ಚಟುವಟಿಕೆಗಳು ಹಾಗೂ ತರಬೇತಿಗಳು ಹೆಚ್ಚು ಕ್ರಿಯಾತ್ಮಕವಾಗುವಲ್ಲಿ ಎಲ್ಲಾ ಜಿಲ್ಲೆಗಳಲ್ಲಿ ಹೆಚ್ಚಿನ ತರಬೇತಿ ಪಡೆದ ಅನುಭವಿ ನಾಯಕರು–ನಾಯಕಿಯರುಗಳ ಅವಶ್ಯಕತೆಯನ್ನು ಮನದಟ್ಟು ಮಾಡಿ – ಈಗಾಗಲೇ ಹೆಚ್. ಡಬ್ಲ್ಯೂ.ಬಿ. – ಪ್ರೀ–ಎ.ಎಲ್.ಟಿ. ಆಗಿರುವವರು ಎ.ಎಲ್.ಟಿ. ಆಗುವಲ್ಲಿ ಬೇಕಾಗುವ ಸಹಾಯ–ಸಹಕಾರ ಹಾಗು ಮಾರ್ಗದರ್ಶನ ಮಾಡುವುದಾಗಿ ತಿಳಿಸಿದ್ದಲ್ಲದೆ – ಯಾರಾರು ಜಿಲ್ಲೆಗಳಲ್ಲಿನ ಸಹಾಯಕ ತರಬೇತಿದಾರರು – ತರಬೇತಿದಾರರುಗಳು Re-orientation ಆಗಬೇಕಾಗಿದೆಯೋ ಅಂತಹ ತರಬೇತುದಾರರುಗಳು ತಕ್ಷಣ ತಮ್ಮ Hon'ble charge ಗಳನ್ನು ರಿನ್ಯೂ ಮಾಡಿಸಿಕೊಳ್ಳಲು, ಅವಶ್ಯಕವಾಗಿ ತರಬೇತಿಗಳಿಗೆ ಹಾಜರಾಗಬೇಕೆಂದು ಕೋರಿರುತ್ತಾರೆ.

**ನಾನು ಜಿಲ್ಲೆಗಳ ನನ್ನ ಸಹೋದ್ಯೋಗಿಗಳಲ್ಲಿ ಕೋರುವುದೇನೆಂದರೆ – ಸಾಕಷ್ಟು ಪ್ರತಿಕೂಲ ವಾತಾವರಣದ ಮಧ್ಯೆಯೂ –ಸ್ಕೌಟ್–ಗೈಡ್ ಚಳವಳಿ ಶತಮಾನೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿದ್ದು – ನಮಗೆ ಲಭ್ಯವಿರುವ ನಿಸ್ವಾರ್ಥ. ಮನೋಭೂಮಿಕೆಯ ಕಾರ್ಯಕರ್ತರುಗಳ ಪಡೆಯೊಂದಿಗೆ ನಾವುಗಳೇ ಚರ್ಚಿಸಿ ಒಪ್ಪಿರುವ ವಾರ್ಷಿಕ ಚಟುವಟಿಕೆಗಳು ಹಾಗೂ ತರಬೇತಿಗಳನ್ನು ಯಶಸ್ವಿಗೊಳಿಸಬೇಕೆಂದು ಸೂಚಿಸುತ್ತೇನೆ.**

**ಫೆಬ್ರವರಿ ಮೂರನೇ ವಾರದಲ್ಲಿ ರಾಜ್ಯಮಟ್ಟದ ಸ್ಕೌಟ್–ಗೈಡ್ ಸಂಘಟಕರುಗಳ ಸಭೆ – ಹಾಗೂ ಕೊನೇವಾರದಲ್ಲಿ ಆಯುಕ್ತರುಗಳ – ಕಾರ್ಯದರ್ಶಿಗಳ ಸಮಾವೇಶ ಕರೆಯಲಿದ್ದು – ತಾವುಗಳು ತಮ್ಮ ಜಿಲ್ಲೆಗಳ ಕಬ್– ಬುಲ್ ಬುಲ್ – ಸ್ಕೌಟ್ –ಗೈಡ್– ರೋವರ್ಸ್–ರೇಂಜರ್ಸ್‌ಗಳ ದಳ–ಘಟಕಗಳನ್ನು ಹೆಚ್ಚು ಕ್ರಿಯಾತ್ಮಕವಾಗಿ ಕಾರ್ಯ ನಿರ್ವಹಿಸುವಲ್ಲಿ ಸೂಕ್ತ ಸಹಾಯ – ಸಹಕಾರ ಹಾಗು ಮಾರ್ಗದರ್ಶನ ಮಾಡಬೇಕಾಗಿ ಸೂಚಿಸುತ್ತೇನೆ.**

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# Personally Speaking

On 7th November, 2012 Bharat Scouts and Guides 'Foundation Day' was celebrated as our 'Flag Day' by scouts/Guides and Scout/Guider leaders all over the Country which contritubed greatly to the visibility of the Movement. At the National Headquarters, Shri Rameshwar Thakur, President of Bharat Scouts and Guides and myself, along with a representative delegation of Scout/ Guide and leaders called on the Vice President of India on the 7th November and presented the Flag Sticker to him. We also called on Shri Pranab Mukherjee, the new President of India on 8th November, and presented the Flag Sticker as also some publications on Scouting/Guiding Movement in India to him. Meetings with both the highest dignitaries were very fruitful and we got their blessings for the growth of the Movement.

In various States and Districts also, Scouts/Guides and the leaders moved out to greet the Government leaders and members of the Society in a similar manner and made useful impact on spreading the Movement through better visibility and personal rapport. While in most States, the initiative taken by the Scout/Guide leaders was commendable, ina few States, it was seen that therewas lukewarm response to this National Programme of the Organisation and in some isolated cases, there was total negative response as they went to the extent to refusing to take delivery of the packet of Flag Stickers or returned them back. However, in such cases, strict displeasure was conveyed to them and one State who had returned the packet, quickly deputed a messenger to take back delivery of the packet from the National Headquarters. The reaction of the remaining one State is being watched so that they get full opportunity to take remedial action before any penal acion is taken against them for displaying total lack of commitment with a negative frame of mind towards such an important National Programme on the 'Foundation Day' of the Organisation.

I would like to send this message to Scout/Guide leaders in every State that the programme of celebrating 'Flag Day' on our 'Foundation Day' is a matter of pride and joy for all of us and anyone who feels otherwise should have no place in the Organisational Set up at any level, be it National, State, District of Unit level.

I congratulate everyone for celebrating our 62nd 'Foundation Day' as 'Flag Day' and hope that they will continue to do so with full enthusiasm in th years to come.

**Lalit Mohan Jain**

National Commissioner

**NOTE : "Reproduced from the November 2012 News Magazine of The Bharat Scouts & Guides, National Headquarters, New Delhi.**

# ರಾಜ್ಯ ವಾರ್ತೆಗಳು

## ರಾಜ್ಯಮಟ್ಟದ ಮುಕ್ತದಳಗಳ ಪಟಾಲಂ ನಾಯಕರ ತರಬೇತಿ ಶಿಬಿರ

ರಾಜ್ಯಮಟ್ಟದ ಮುಕ್ತದಳಗಳ ಪಟಾಲಂ ನಾಯಕರ ತರಬೇತಿ ಶಿಬಿರವು ದಿನಾಂಕ 21-11-2012 ರಿಂದ 23-12-2012 ರ ವರೆಗೆ ರಾಜ್ಯ ತರಬೇತಿ ಕೇಂದ್ರ ಕೊಂಡಜ್ಜಿ, ಇಲ್ಲಿ ಹಮ್ಮಿಕೊಳ್ಳಲಾಗಿತ್ತು. ರಾಜ್ಯ ಸಂಘಟನಾ ಆಯುಕ್ತರು ಶ್ರೀ ಮಂಜುನಾಥಾಚಾರ್ ಶಿಬಿರದ ಸಂಯೋಜಕರಾಗಿದ್ದರು.

ಮಂಡ್ಯ, ದಾವಣಗೆರೆ, ಬೆಳಗಾಂ, ಚಿತ್ರದುರ್ಗ, ಉಡುಪಿ ಹಾಗೂ ಶಿವಮೊಗ್ಗ ಜಿಲ್ಲೆಗಳಿಂದ ಭಾಗವಹಿಸಿದ್ದ ಮುಕ್ತದಳಗಳ ಪಟಾಲಂ ನಾಯಕರು (68) ಗಳನ್ನು ಶ್ರೀ ದೀನ ದಯಾಳ ನಾಯ್ಡು, ಪ್ರೊ॥ ಪಿ. ಶಿವಶಂಕರ ಹಾಗೂ ಶ್ರೀ ಜೆ.ಬಿ. ಮಲ್ಲಾರಾಧ್ಯ ತಂಡಗಳಾಗಿ ರಚಿಸಿ ಶ್ರೀ ಸ್ಯಾಮ್ಯುವೆಲ್ ಸತ್ಯಕುಮಾರ್, ಶ್ರೀ ಬಾಲಕೃಷ್ಣ, ಶ್ರೀ ಸಿ.ಎನ್. ಮಹೇಶ್, ಇವರು ನಾಯಕರಾಗಿಯೂ ಇಡೀ ಶಿಬಿರಕ್ಕೆ ಶ್ರೀ ಆನಂದ ಅಡಿಗ ನಾಯಕರಾಗಿದ್ದರು.

ದಿನಾಂಕ 21-11-2012 ರಂದು ಶ್ರೀ ಟಿ.ಎ. ಮಂಜುನಾಥಾಚಾರ್ ಶಿಬಿರವನ್ನು ಉದ್ಘಾಟಿಸಿ ಶುಭ ಹಾರೈಸಿದರು. ಶಿಬಿರಾವಧಿಯಲ್ಲಿ ಪಟಾಲಂ ಪದ್ದತಿ, ನಾಯಕರ ಗುಣ ಲಕ್ಷಣಗಳು, ಜವಾಬ್ದಾರಿ ಕರ್ತವ್ಯಗಳು- ಪಟಾಲಂ ನಾಯಕರ ಸಭೆ (C.O.H) ಪಟಾಲಂ ಸಭೆ, ಮಾದರಿ ದಳಸಭೆ, ಧ್ವಜ ಸ್ತಂಭರಚನೆ, ಧ್ವಜವಂದನೆ ಶಿಬಿರ ಉಪಕರಣ ತಯಾರಿ, ಗಂಟುಗಳು, ಕಟ್ಟುಗಳು, ವನವಿದ್ಯಾ ಸಂಕೇತ, ಹೊರಸಂಚಾರ, ಶಿಬಿರಾಗ್ನಿ, ಸರ್ವಧರ್ಮ ಪ್ರಾರ್ಥನೆ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

---

## ಸಹಾಯಕ ರಾಜ್ಯ ಸಂಘಟನಾ, ಜಿಲ್ಲಾ ಸಂಘಟನಾ ಆಯುಕ್ತರುಗಳ ಹಾಗು ಜಿಲ್ಲಾ ಸಂಘಟಕರುಗಳ ಸಭೆ

ದಿನಾಂಕ 3 ಮತ್ತು 4 ನೇ ಡಿಸೆಂಬರ್ 2012 ರಂದು ಬೆಂಗಳೂರಿನ ಶಾಂತಿಗೃಹ ತರಬೇತಿ ಕೇಂದ್ರದಲ್ಲಿ ಸಹಾಯಕ ರಾಜ್ಯ ಸಂಘಟನಾ ಹಾಗೂ ಜಿಲ್ಲಾ ಸಂಘಟನಾ ಆಯುಕ್ತರುಗಳ ಮತ್ತು ಜಿಲ್ಲಾ ಸಂಘಟಕರುಗಳ ಸಭೆ ನಡೆಯಿತು. 2012-13ರಲ್ಲಿ ಜಿಲ್ಲೆಯಲ್ಲಿ ಇದುವರೆವಿಗೆ ಜರುಗಿದ ಕಾರ್ಯಕ್ರಮಗಳು, ತರಬೇತಿಗಳು ಹಾಗೂ ಗಣತಿ, ರ್‍ಯಾಲಿ ಇತರ ವಿಷಯಗಳ ಬಗ್ಗೆ ಚರ್ಚಿಸಲಾಯಿತು.

---

## ರಾಜ್ಯಮಟ್ಟದ ಆಯುಕ್ತರುಗಳ ಮತ್ತು ಕಾರ್ಯದರ್ಶಿಗಳ ಸಮಾವೇಶ

ದಿನಾಂಕ 15-12-2012 ರಾಜ್ಯ ಕೇಂದ್ರ ಕಛೇರಿಯಲ್ಲಿ ರಾಜ್ಯಮಟ್ಟದ ಆಯುಕ್ತರುಗಳ ಹಾಗೂ ಕಾರ್ಯದರ್ಶಿಗಳ ಸಮಾವೇಶವು ಜರುಗಿತು. ಈ ಸಮಾವೇಶದಲ್ಲಿ 26 ಜಿಲ್ಲೆಗಳಿಂದ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು, ಜಿಲ್ಲಾ ಕಾರ್ಯದರ್ಶಿಗಳು, ಸಹಾಯಕ ರಾಜ್ಯ ಆಯುಕ್ತರು, ಸ್ಥಾನೀಯ ಆಯುಕ್ತರು ಒಟ್ಟು 60 ಪ್ರತಿನಿಧಿಗಳು ಭಾಗವಹಿಸಿದ್ದರು. 2012-13ಕ್ಕೆ ಸಂಬಂಧಪಟ್ಟ ತಮ್ಮ ತಮ್ಮ ಜಿಲ್ಲೆಗಳ ದಳ, ಘಟಕಗಳ ಅಂಕಿ-ಅಂಶಗಳು, ತರಬೇತಿಗಳು, ವಿವಿಧ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಲಾಯಿತು.

# ಜಿಲ್ಲಾ ವಾರ್ತೆಗಳು

## ವಿಜಾಪುರ

ದಿನಾಂಕ 30-11-2012 ರಂದು ಸರಕಾರಿ ಪ.ಪೂ. ಕಾಲೇಜಿನ ಪ್ರಾಚಾರ್ಯರಾದ ಶ್ರೀ ವಿ.ಬಿ. ಮೋಟಗಿ ಅವರು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ವಿಜಾಪುರ ಜಿಲ್ಲೆಯ ಪ.ಪೂರ್ವ ಕಾಲೇಜಿನ ಪ್ರಾಚಾರ್ಯರಿಗೆ ಹಾಗೂ ಉಪನ್ಯಾಸಕರಿಗೆ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಸಾಮಾನ್ಯ ಮಾಹಿತಿ ಶಿಬಿರ ಉದ್ಘಾಟಿಸಿದರು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಾಸುದೇವ ಹೆರಕಲ್ ಅವರು ಮಾತನಾಡಿ ವಿಜಾಪುರ ಜಿಲ್ಲಾ ಪ.ಪೂ. ಕಾಲೇಜಿನ ಪ್ರಾಚಾರ್ಯರಿಗೆ ಇದು ಮೊಟ್ಟ ಮೊದಲ ಶಿಬಿರವಾಗಿದ್ದು ಇದೊಂದು ದಾಖಲೆ ಎಂದರಲ್ಲದೆ, ನಿಮ್ಮಲ್ಲಿರುವ ಪ್ರೇರಣೆಯಿಂದ ಖಂಡಿತಾ ವಿಜಾಪುರ ಜಿಲ್ಲಾ ಸ್ಕೌಟಿಂಗ್ ಉನ್ನತ ಶಿಖರಕ್ಕೇರುವದರಲ್ಲಿ ಎರಡು ಮಾಡಿತಲ್ಲ ಎಂದು ನುಡಿದರು.

ಜಿಲ್ಲಾ ಸಂಘಟನಾ ಆಯುಕ್ತರಾದ ಜಗದೀಶ ಬೋಳಸೂರ ಪ್ರಾಸ್ತಾವಿಕವಾಗಿ ಮಾತನಾಡಿದರು. ಜಿಲ್ಲಾ ಖಜಾಂಚಿ ಸಹಜಾನಂದ ದಂಧರಗಿ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಎಸ್.ಎಸ್. ಬೊಮ್ಮನಳ್ಳಿ ಸ್ವಾಗತಿಸಿದರು, ಪಿ.ಎಸ್. ಕುಂಬಾರ ವಂದಿಸಿದರು.

***************

ದಿನಾಂಕ : 04-12-2012 ರಂದು ಸ್ಕೌಟ್ಸ್ ಮತ್ತು ಗೈಡ್ಸ್ ತಾಲ್ಲೂಕಾ ಮಟ್ಟದ ಸಮಾವೇಶ, ದಿ॥ ಟಿ.ಕೆ, ಸಜ್ಜನ ಸ್ಮರಣಾರ್ಥ ಜಿಲ್ಲಾ ಅತ್ಯುತ್ತಮ ಸ್ಕೌಟ್ಸ್ ಮಾಸ್ಟರ್ ಮತ್ತು ಗೈಡ್ಸ್ ಕ್ಯಾಪ್ಟನ್ ಪ್ರಶಸ್ತಿ ಪ್ರಧಾನ ಮತ್ತು ರಾಜ್ಯ ಪ್ರಶಸ್ತಿ ಪಡೆದ ಸ್ಕೌಟ್-ಗೈಡ್‌ಗಳಿಗೆ ಮುದ್ದೇಬಿಹಾಳ್‌ನಲ್ಲಿ ಸನ್ಮಾನ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಉದ್ಘಾಟಕರಾದ ಶ್ರೀಮತಿ ಅಕ್ಕಮಹಾದೇವಿ ಹೊಕ್ರಾಣಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಮಕ್ಕಳಲ್ಲಿ ಶಿಸ್ತು ಹಾಗೂ ನಾಯಕತ್ವ ಬೆಳೆಸುವಲ್ಲಿ ಸಹಕಾರಿಯಾಗುತ್ತದೆ ಎಂದರು.

ಜಿಲ್ಲಾ ಕೇಂದ್ರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ತರಬೇತಿ ನೀಡಲು ಬಿಜಾಪುರದಲ್ಲಿ ಸರಕಾರ ಮಂಜೂರು ಮಾಡಿರುವ 15 ಎಕರೆ ಜಮೀನಿನಲ್ಲಿ ತರಬೇತಿ ಕೇಂದ್ರದ ಮುಖ್ಯ ಕಟ್ಟಡ ಕಾಮಗಾರಿ ವರ್ಷದಲ್ಲಿ ಪೂರ್ಣಗೊಳ್ಳಲಿದೆ ಎಂದು ಕರ್ನಾಟಕ ಚಲನಚಿತ್ರ ಅಕಾಡೆಮಿ ಬೆಳ್ಳಿ ಮಂಡಲ ಉಪಾಧ್ಯಕ್ಷ ಮತ್ತು ಜಿಲ್ಲಾ ಸ್ಕೌಟೇತರ ಪ್ರತಿನಿಧಿ ಶ್ರೀಶರಣು ಸಬರದ ಪ್ರಕಟಿಸಿದರು. ಶ್ರೀ ಜಗದೀಶ ಬೋಳಸೂರ ಡಿ.ಓ.ಸಿ. (ಎಸ್.) ಪ್ರಾಸ್ತಾವಿಕವಾಗಿ ಮಾತನಾಡಿದರು.

ದೈಹಿಕ ಶಿಕ್ಷಣಾಧಿಕಾರಿ ಶ್ರೀ ಎಸ್.ವಿ. ಚಲವಾದಿ, ಜಿಲ್ಲಾ ಸಹಕಾರಿ ಬ್ಯಾಂಕ್ ಉಪಾಧ್ಯಕ್ಷ ಬಿ.ಎ. ಬಿರಾದಾರ, ಪುರಸಭೆಯ ಸದಸ್ಯ ಬಸವರಾಜ ಶ್ರೀ ನಂದಿಕೇಶ್ವರ ಮಠ ರಾಜ್ಯ ಪ್ರಶಸ್ತಿ ಪುರಸ್ಕೃತ ಶಿಕ್ಷಕ ಶ್ರೀ ಡಿ.ಎಸ್. ಚಳಗೇರಿ ಪತ್ರಕರ್ತರ ಸಂಘದ ಅಧ್ಯಕ್ಷ ಶ್ರೀ ಡಿ.ಬಿ. ಪಡಪಡಗಿ ದೈಹಿಕ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಎಂ.ಪಿ. ಶೆಟ್ಟರ ಮತ್ತು ಜಿಲ್ಲಾ ಖಜಾಂಚಿ ಶ್ರೀ ಸಹಜಾನಂದ ದಂದರಗಿ ಉಪಸ್ಥಿತರಿದ್ದರು. ಪುರಸಭೆಯ ಅಧ್ಯಕ್ಷೆ ಶ್ರೀಮತಿ ಮಲ್ಲಮ್ಮ ಬಿರಾದಾರ ಅಧ್ಯಕ್ಷತೆ ವಹಿಸಿದರು.

ಶ್ರೀ ಆರ್. ವಿ. ಮದಿಹಾಳ, ಶ್ರೀ ಕೆ.ಎ. ಹಿರೇಗೌಡರ, ಶ್ರೀ ಎ.ಆರ್. ಚಾಂದತಪಟ್ ಎಸ್. ಪಾಟೀಲ, ಶ್ರೀ ಎ.ಆರ್. ಚಾಂದತವಟೆ  ಎಸ್. ಪಾಟೀಲ, ಶ್ರೀ ಜಯರಾಮ ಹೊಟಗಾರ, ದೇವರಕೊಳ್ಳದ ಶ್ರೀ ಆನಂದ ಡಿ.ಆರ್. ಹಿರೇಮಠ ಶ್ರೀ ಎ.ಎಸ್. ದೇಸಾಯಿ ಶ್ರೀ ಎಸ್. ಬಿ. ಬಿರಾದಾರ ಶ್ರೀ ಎಸ್.ಎಂ. ಅಮರಗೊಂಡ ಶ್ರೀ ಎ.ಜೆ. ಜಾಧವ ಇವರಿಗೆ ಜಿಲ್ಲಾ ಅತ್ಯುತ್ತಮ ಸ್ಕೌಟ್ಸ್ ಮಾಸ್ಟರ್ ಶ್ರೀಮತಿ ಪಿ.ಎಂ. ಪೂಜಾರಿ, ಶ್ರೀಮತಿ ಸಂಧ್ಯಾ ದೇಶಪಾಂಡೆ, ಶ್ರೀ ಎಸ್.ಬಿ. ಮುತ್ತಪನವರ ಶ್ರೀಮತಿ ವಾಣಿಶ್ರೀ ಪಾಟೀಲ ಇವರಿಗೆ ಅತ್ಯುತ್ತಮ ಜಿಲ್ಲಾ ಗೈಡ್ಸ್ ಕ್ಯಾಪ್ಟನ್ ಮತ್ತು ಶ್ರೀ ಎಸ್.ಎಸ್. ಹುಬ್ಬಳ್ಳಿ, ಶ್ರೀ ಪಿ.ಎಸ್. ಕುಂಬಾರ ಇವರಿಗೆ ಅತ್ಯುತ್ತಮ ತಾಲೂಕಾ ಕಾರ್‍ಯದರ್ಶಿ ಪ್ರಶಸ್ತಿ ಪ್ರದಾನ ಮಾಡಲಾಯಿತು. ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಕಾರ್ಯದರ್ಶಿಗಳು ವಂದಿಸಿದರು.

# ರಾಯಚೂರು

ದಿನಾಂಕ : 27-11-2012 ರಂದು ಜಿಲ್ಲಾ ಸಂಸ್ಥೆ ರಾಯಚೂರು ಮತ್ತು ಸ್ಥಳೀಯ ಸಂಸ್ಥೆ, ಮಾನವಿ ಮತ್ತು ಶಾರದಾ ವಿದ್ಯಾನಿಕೇತನ, ಮಾನವಿ ಇವರ ಆಶ್ರಯದಲ್ಲಿ ಬಿ.ಆರ್.ಪಿ. ಸಿ.ಆರ್.ಪಿ. ಹಾಗೂ ಹಿರಿಯ ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಮಾಹಿತಿ ಶಿಬಿರವನ್ನು ಶಾರದಾ ವಿದ್ಯಾನಿಕೇತನ ಮಾನವಿಯಲ್ಲಿ ಏರ್ಪಡಿಸಲಾಗಿತ್ತು. ಉದ್ಘಾಟಕರಾಗಿ ಮಾನವಿ ಕ್ಷೇತ್ರದ ಶಾಸಕರಾದ ಶ್ರೀ ಜಿ. ಹಂಪಯ್ಯ ನಾಯಕ ಆಗಮಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಮಧುಸೂಧನ ಗುಪ್ತಾ ಕಾರ್ಯದರ್ಶಿಗಳು ಶಾರದಾ ಶಿಕ್ಷಣ ಸಂಸ್ಥೆ ಮತ್ತು ಶ್ರೀ ಆರ್. ತಿಮ್ಮಯ್ಯ ಶೆಟ್ಟಿ, ಅಧ್ಯಕ್ಷರು, ಗಾಂಧಿ ಸ್ಮಾರಕ ಶಿಕ್ಷಣ ಸಂಸ್ಥೆ, ಮಾನವಿ ಆಗಮಿಸಿದ್ದರು. ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು.

ವೇದಿಕೆ ಮೇಲೆ ಶ್ರೀ ಶೇಷಗಿರಿರಾವ್ ಕುಲಕರ್ಣಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಅಝೀಜಾ ಸುಲ್ತಾನ ಜಿಲ್ಲಾ ಆಯುಕ್ತರು ಗೈಡ್ಸ್, ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕೋಶಾಧಿಕಾರಿಗಳು ಶ್ರೀ ವೆಂಕಟೇಶ ಗುಡಿಹಾಳ ಬಿ.ಆರ್.ಸಿ. ಸಮನ್ವಯಾಧಿಕಾರಿಗಳು ಶ್ರೀಮತಿ ಅರಿಶ ತಾಲ್ಲೂಕ ದೈಹಿಕ ಶಿಕ್ಷಣಾಧಿಕಾರಿಗಳು ಶ್ರೀ ಚನ್ನಬಸವ ಪ್ರಭಾರಿ ಬಿ.ಇ.ಒ. ಶ್ರೀ ಆರ್. ಹೆಚ್. ಸಾಗರ ಕಾರ್ಯದರ್ಶಿಗಳು ರಾಯಚೂರು ಶ್ರೀ ಮಹಾವೀರ ಜೈನ್ ಉಪಸ್ಥಿತರಿದ್ದರು. ಶ್ರೀ ಸಿ.ಎಸ್. ರೆಡ್ಡಿ, ಗೌರವ ರಾಜ್ಯ ತರಬೇತಿ ಆಯುಕ್ತರು ಸಂಪನ್ಮೂಲ ವ್ಯಕ್ತಿಗಳಾಗಿದ್ದರು.

ಶ್ರೀಮತಿ ಅಜೀಜಾ ಸುಲ್ತಾನ ಡಿ.ಸಿ.(ಜಿ) ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ರಾವುತರಾವ್ ಬರೂರು ಡಿ.ಒ.ಸಿ.(ಎಸ್) ಸ್ವಾಗತ ಮಾಡಿದರು. ಶ್ರೀ ಎಮ್. ರಾಮಲಿಂಗಪ್ಪ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ ಮಾನವಿ ಇವರು ಕಾರ್ಯಕ್ರಮ ನಿರೂಪಿಸಿದರು.

ದಿನಾಂಕ 07-12-2012 ರಂದು ಲಿಟ್ಲ್ ಫ್ಲವರ್ ಹಿ. ಪ್ರಾಥಮಿಕ ಹಾಗೂ ಪ್ರೌಢಶಾಲೆ ಹುಲಿಗುಡ್ಡ ಲಿಂಗಸುಗೂರಿನಲ್ಲಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ನೂತನ ಘಟಕ ಉದ್ಘಾಟನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಅಮರಗುಂಡಪ್ಪ ಮೇಟಿ, ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಲಿಂಗಸುಗೂರು ಇವರು ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಜ್ಯೋತಿ ಬೆಳಗಿಸುವ ಮೂಲಕ ಘಟಕವನ್ನು ಉದ್ಘಾಟಿಸಿದರು ಶ್ರೀ ರಾವುತರಾವ್ ಡಿ.ಓ.ಸಿ., ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು.

ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಶ್ರೀಮತಿ ಅಲೆಖಾನ್ ಪ್ರಾಂಶುಪಾಲರು ಪ್ರಥಮ ದರ್ಜೆ ಕಾಲೇಜು, ರಾಯಚೂರು, ಶ್ರೀಮತಿ ನಾಗರತ್ನ, ಶ್ರೀ ಶಿವಪುತ್ರಪ್ಪ ಭೂತಲ್ ತಾಲೂಕ ಕಾರ್ಯದರ್ಶಿ ಭಾ.ಸ್ಕೌ.ಗೈ. ಶ್ರೀ ಪಂಚಾಕ್ಷರಯ್ಯ ಹಿರೇಮಠ ತಾಲೂಕ ಖಜಾಂಚಿ, ಶರಣಪ್ಪ, ಮುಂತಾದವರು ಭಾಗವಹಿಸಿದ್ದರು. ಶಾಲೆಯ ಮುಖ್ಯೋಪಾದ್ಯಯಿನಿ ಸಿಸ್ಟರ್ ಮೇರಿ. ಎ.ಸಿ. ಸ್ವಾಗತಿಸಿದರು. ಸಹ ಶಿಕ್ಷಕ ಶ್ರೀ ಮುತ್ತುನಾಥ ವಂದಿಸಿದರು. ದೈಹಿಕ ಶಿಕ್ಷಕ ಶ್ರೀ ಬಸವರಾಜ ಗೋನಾಳ ಕಾರ್ಯಕ್ರಮವನ್ನು ನಿರೂಪಿಸಿದರು.

# ದಾವಣಗೆರೆ

55ನೇ ಜಾಂಬೂರಿ ಆನ್ ದ ಏರ್ ಮತ್ತು 16ನೇ ಜಾಂಬೂರಿ ಆನ್ ದ ಇಂಟರ್‌ನೆಟ್ ಅಂಗವಾಗಿ 20 ಮತ್ತು 21ನೇ ಅಕ್ಟೋಬರ್ 2012 ರಂದು ಪ್ರಯುಕ್ತ ನಮ್ಮ ದಾವಣಗೆರೆ ಜಿಲ್ಲೆಯ ಸೇಂಟ್ ಪಾಲ್ಸ್ ಪ್ರೌಢಶಾಲೆ ಮತ್ತು ಶ್ರೀ ತರಳಬಾಳು ಜಗದ್ಗುರು ವಿದ್ಯಾ ಸಂಸ್ಥೆ 40 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ವಿವಿಧ ರಾಜ್ಯಗಳ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಜೊತೆ ಮಾತನಾಡುವ ಮೂಲಕ ಉಭಯ ಕುಶಲೋಪರಿಯನ್ನು ವಿನಿಮಯ ಮಾಡಿಕೊಂಡರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಅಧ್ಯಕ್ಷರಾದ ಶ್ರೀ ಮಹಮದ್ ವಾಸಿಲ್, ಕಾರ್ಯದರ್ಶಿಗಳಾದ ಶ್ರೀಮತಿ ಶಶಿಕಲಾ, ಖಜಾಂಚಿಗಳಾದ ಶ್ರೀ ಬಿ.ವಿ. ವಿಶ್ವನಾಥ್, ಜಿಲ್ಲಾ ಸ್ಕೌಟ್ ಗೈಡ್ ಆಯುಕ್ತರುಗಳಾದ ಶ್ರೀ ಎ.ಪಿ. ಷಡಕ್ಷರಪ್ಪ ಮತ್ತು ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಶುಭಕೋರಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ದಿನಾಂಕ 08-11-2012 ರಂದು ಜಿಲ್ಲಾ ಮಟ್ಟದ ಸ್ಕೌಟರ್ಸ್ ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ರೋಟರಿ ಬಾಲಭವನ, ದಾವಣಗೆರೆ ಇಲ್ಲಿ ಆಯೋಜಿಸಲಾಗಿತ್ತು. ಸದರಿ ಸಮಾವೇಶದಲ್ಲಿ 151 ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಭಾಗವಹಿಸಿದ್ದರು.

ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಗೈಡ್ ಆಯುಕ್ತರು, ಸರ್ವರಿಗೂ ಸ್ವಾಗತ ಕೋರಿದರು. ಶ್ರೀಮತಿ ಶಶಿಕಲಾ, ಜಿಲ್ಲಾ ಕಾರ್ಯದರ್ಶಿ ಇವರು ಪ್ರಾಸ್ತಾವಿಕನುಡಿ ನುಡಿದರು. ಉದ್ಘಾಟನೆಯನ್ನು ಶ್ರೀಮತಿ ಹೆಚ್.ಎಂ. ಪ್ರೇಮ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ ಇವರು ನೆರವೇರಿಸಿದರು ಹಾಗೂ ಸ್ಕೌಟ್ ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿದರು, ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ದಾವಣಗೆರೆ ಇವರು ಸಮಾವೇಶದ ಅಧ್ಯಕ್ಷತೆಯನ್ನು ವಹಿಸಿದ್ದರು. ಸಮಾವೇಶದ ನೆನಪಿನ ಕಾಣಿಕೆಯನ್ನು ಬಿಡುಗಡೆಗೊಳಿಸಿ, ರಾಜ್ಯ ಪ್ರಶಸ್ತಿ ಪುರಸ್ಕೃತೆ ಶ್ರೀಮತಿ ಯಲ್ಲಮ್ಮ ಎಸ್. ಶಾನ್‌ವಾಡ್‌ರವರು ಹಾಗೂ ಜಿಲ್ಲಾ ಪ್ರಶಸ್ತಿ ಪುರಸ್ಕೃತೆ ಶ್ರೀಮತಿ ಮಂಜುಳಮ್ಮ ಇವರನ್ನು ಸನ್ಮಾನಿಸಿದರು.

ಈ ಸಂದರ್ಭದಲ್ಲಿ ಶ್ರೀ ಡಿ.ಕೆ. ಶಿವಕುಮಾರ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ, ಶ್ರೀ ತ್ರಿಲೋಕ್ ಸಿಂಗ್, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ದಾವಣಗೆರೆ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಇವರು ವಂದನೆಗಳನ್ನು ಸಲ್ಲಿಸಿದರು. ಸಮಾವೇಶದ ನಿರೂಪಣೆಯನ್ನು ಶ್ರೀಮತಿ ಎಂ.ರತ್ನ, ಎಂ.ಎಂ.ಎಂ. ಬಾಲಿಕಾ ಪ್ರೌಢಶಾಲೆ, ಇವರು ಮಾಡಿದರು.

ಸಮಾವೇಶದ ನಾಯಕತ್ವನ್ನು ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು ಇವರು ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಶಶಿಕಲಾ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ನೂರುಲ್ಲಾ, ಜಿಲ್ಲಾ ತರಬೇತಿ ಆಯುಕ್ತರು ಗೈಡ್ಸ್ ಶ್ರೀಮತಿ ಎಸ್. ಸಿದ್ದಮ್ಮ, ಜಿಲ್ಲಾ ಖಜಾಂಚಿಗಳಾದ ಶ್ರೀ ಬಿ.ವಿ. ವಿಶ್ವನಾಥ್, ಜಿಲ್ಲಾ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಆರ್. ಸುಖವಾಣಿ ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ದಿನಾಂಕ 1-12-2012 ರಿಂದ 2-12-2012 ರ ವರೆಗೆ ಮುಕ್ತ ದಳಗಳ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪದಕ ತರಬೇತಿ ಶಿಬಿರ ಧ.ರಾ.ಮ. ಸ್ಕೌಟ್ಸ್ ಭವನದ ಆವರಣದಲ್ಲಿ ನಡೆಯಿತು. ಶಿಬಿರದ ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಎನ್.ಡಿ. ತಮ್ಮಣ್ಣನವರ್, ಎ.ಎಲ್.ಟಿ.(ಸ್ಕೌ) ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಗೈಡ್ ವಿಭಾಗದ ನಾಯಕರಾಗಿ ಶ್ರೀಮತಿ ಶಶಿಕಲಾ, ಎ.ಎಲ್.ಟಿ.(ಗೈ), ಜಿಲ್ಲಾ ಕಾರ್ಯದರ್ಶಿ ವಹಿಸಿದ್ದರು. ಸುಮಾರು 250 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಅಧ್ಯಕ್ಷ ಶ್ರೀ ಮಹಮ್ಮದ್ ವಾಸಿಲ್, ಜಿಲ್ಲಾ ಸ್ಕೌಟ್-ಗೈಡ್ ಆಯುಕ್ತ ಶ್ರೀ ಎ.ಪಿ.ಷಡಾಕ್ಷರಪ್ಪ, ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಖಜಾಂಚಿ ಬೂಸ್ನೂರ್ ವಿಶ್ವನಾಥ್, ಶ್ರೀ ಶಂಕರ್ ನಾಯ್ಕ್, ಶ್ರೀ ಶರಣಯ್ಯ ಶಿಬಿರಕ್ಕೆ ಭೇಟಿ ನೀಡಿದ್ದರು.

## ಮೈಸೂರು

ದಿನಾಂಕ : 17-11-2012 ರಂದು ಮೈಸೂರಿನ ದಕ್ಷಿಣವಲಯದ 36ನೇ ಕಬ್, ಬುಲ್ ಬುಲ್, ಸ್ಕೌಟ್ ಗೈಡ್ ರ್‍ಯಾಲಿಯು ಹಾರ್ಡ್‌ವಿಕ್ ಶಾಲೆಯ ಮೈದಾನದಲ್ಲಿ ವಿಜೃಂಬಣೆಯಿಂದ ನೆರವೇರಿತು. ಶ್ರೀಮತಿ ಸುಜಯ, ದಕ್ಷಿಣ ವಲಯದ ಅಧ್ಯಕ್ಷರು ಅಧ್ಯಕ್ಷತೆಯನ್ನು ವಹಿಸಿದ್ದರು.

ಬಾಲಚಮೂಗಳಗೆ ಘನವಂದನೆ, ಮೌಗ್ಲಿ ಕಥೆ ಮತ್ತು ರಾಷ್ಟ್ರ ಗೀತೆ, ಬುಲ್‌ಬುಲ್ಸ್ ಮಕ್ಕಳಿಗೆ ಸ್ವಾಗತ ಗೀತೆ, ಕಲಿಸಲಾಯಿತು. ಸಂದೇಶ ರವಾನೆ ಸ್ಪರ್ಧೆ ಮತ್ತು ಸುಧಾರಿತ ಗುಡಾರ ನಿರ್ಮಾಣ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು.

ರ್‍ಯಾಲಿಯ ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಸಹಾಯಕ ಆಯುಕ್ತೆ (ಗೈ), ಡಾ. ಪಿ. ರತ್ನ ಅರಸ್ ರವರು ಅಧ್ಯಕ್ಷತೆ ವಹಿಸಿದ್ದರು. ಮುಕ್ತಾಯ ಸಮಾರಂಭದ ಮುಖ್ಯ ಅತಿಥಿಗಳಾಗಿ ಶ್ರೀ ಟಿ.ಎಸ್. ಸುಬ್ಬಣ್ಣ ಸಾರ್ವಜನಿಕ ಪ್ರೌಢಶಾಲೆಯ ಮುಖ್ಯ ಶಿಕ್ಷಕರು. ಸಂಘದ ಉಪಾಧ್ಯಕರಾದ ಶ್ರೀ ಕೆ.ಎನ್. ಗುರುರಾಜ್, ಜಿಲ್ಲಾ ಗೈಡ್ ಆಯುಕ್ತರಾದ ಡಾ. ಕಮಲಾರಾಮನ್

ಸಂಘದ ಸಭಾಪತಿಗಳಾದ ಶ್ರೀಮತಿ ಮೀರಾಬಾಯಿಯವರು ಆಗಮಿಸಿದ್ದರು. ರ್‍ಯಾಲಿಯ ವರದಿಯನ್ನು ಕಾರ್ಯದರ್ಶಿಗಳಾದ ಶ್ರೀ ಬಾಲಕೃಷ್ಣ. ಡಿ.ರವರು ಮಂಡಿಸಿದರು.

## ಚಿತ್ರದುರ್ಗ

ದಿನಾಂಕ 26-11-2012 ರಿಂದ 2-12-2012 ರ ವರೆಗೆ ನಡೆದ ಅಂತರ ರಾಷ್ಟ್ರೀಯ ಮಟ್ಟದ ಸ್ಕಾಲರ್‌ಶಿಪ್ ಕಾರ್ಯಕ್ರಮ "Millennium Development Goal VI" ಇದರಲ್ಲಿ ಅತ್ಯಂತ ಯಶಸ್ವಿಯಾಗಿ ಭಾಗವಹಿಸಿದ ಕು॥ ದಿವ್ಯಶ್ರೀ ಹೆಚ್.ಎಂ. ಮತ್ತು ತಂದೆ ರಾಜಶೇಖರ್ ಪ್ರಿ.ಎಲ್.ಟಿ. ಇವರನ್ನು ಜಿಲ್ಲಾ ಸಂಸ್ಥೆಯ ಮತ್ತು ಪದಾಧಿಕಾರಿಗಳು ಅಭಿನಂದಿಸಿದ್ದಾರೆ.

ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ಕಬ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರವನ್ನು ದಿನಾಂಕ 29-11-2012 ರಿಂದ 6-12-2012 ರ ವರೆಗೆ ಶ್ರೀಮಠ ಸಾಣೇಹಳ್ಳಿ ಹೊಸದುರ್ಗ ತಾಲ್ಲೂಕು ಚಿತ್ರದುರ್ಗ ಜಿಲ್ಲೆ ಇಲ್ಲಿ ಆಯೋಜಿಸಲಾಗಿತ್ತು. ಸದರಿ ಶಿಬಿರಕ್ಕೆ ಜಿಲ್ಲೆಯ 60 ಶಿಕ್ಷಕ ಶಿಕ್ಷಕಿಯರು ಭಾಗವಹಿಸಿದ್ದರು.

ದಿನಾಂಕ : 29-11-2012 ರಂದು ಶ್ರೀ ಪಂಡಿತಾರಾಧ್ಯ ಶಿವಕುಮಾರ ಸ್ವಾಮಿಗಳು ಶಿಬಿರವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಸಾಣೇಹಳ್ಳಿ ರಂಗಭೂಮಿ ವೇದಿಕೆಯ ಕಲಾವಿದರು ಶ್ರೀ ಪ..ಅ.ನ. ರವರ 'ಅಹಲ್ಯೆ' ಸಂಸ್ಕೃತ ನಾಟಕವನ್ನು ಅಭಿನಯಿಸಿದರು.

ಶಿಬಿರಾರ್ಥಿಗಳು ಅತ್ಯಂತ ಆಸಕ್ತಿಯಿಂದ ತರಬೇತಿಯಲ್ಲಿ ನಿರತರಾಗಿದ್ದರು. ಹೊರ ಸಂಚಾರ, ಸರ್ವಧರ್ಮ ಪ್ರಾರ್ಥನೆ, ವನವಿದ್ಯಾ ಸಂಕೇತ, ಗಂಟುಗಳು, ಲ್ಯಾಷಿಂಗ್ಸ್, ಅಂದಾಜು ಮಾಡುವಿಕೆ. ಕಂಪಾಸ್, ಪ್ರಥಮ ಚಿಕಿತ್ಸೆ ಮುಂತಾದ ಚಟುವಟಿಕೆಗಳನ್ನು ನುರಿತ ಬೋಧಕರಿಂದ ಬೋಧಿಸಲಾಯಿತು.

ದಿನಾಂಕ 15-12-2012 ರಂದು ಸಂಜೆ 5 ಗಂಟೆಗೆ ಮುಕ್ತಾಯ ಸಮಾರಂಭ ಏರ್ಪಡಿಸಲಾಯಿತು. ಶ್ರೀ ಸುರೇಶ ರಾಜು ಜಿ. ಸ್ಕೌಟ್ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಹೇಮಂತಿನಿ ಪ್ರಕಾಶ ಜಿಲ್ಲಾ ಗೈಡ್ ಆಯುಕ್ತರು ಹಿತವಚನ ನೀಡಿದರು. ಶ್ರೀ ಮಲ್ಲಿಕಾರ್ಜುನ, ಡಿ.ಇಡಿ, ಕಾಲೇಜು ಪ್ರಾಂಶುಪಾಲರು ಸಾಣೇಹಳ್ಳಿ ಇವರು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ಎ.ವಿ. ವಾರದ. ಜಿಲ್ಲಾ ಕಾರ್ಯದರ್ಶಿಗಳು ಸರ್ವರನ್ನು ಸ್ವಾಗತಿಸಿದರು. ಶ್ರೀಮತಿ ಭುವನ ಹೆಡ್ ಕ್ವಾಟರ್ಸ್ ಕಮೀಷನರ್, ಶ್ರೀಮತಿ ವೀಣಾಸ್ವಾಮಿ, ಎ.ಡಿ.ಸಿ., ಶ್ರೀಮತಿ ರೀನಾ ವೀರಭದ್ರಪ್ಪ, ಹೆಡ್ ಕ್ವಾಟರ್ಸ್ ಕಮೀಷನರ್, ಶ್ರೀ ಧನಪಾಲ್ ಉಪಸ್ಥಿತರಿದ್ದರು.

ಶ್ರೀ ಬಾಬುರಾವ ನಿಂಬೂರಿ, ಎ.ಎಲ್.ಟಿ. (ಎಸ್.) ಶ್ರೀ ನಾಯಕ ಬೊಮ್ಮನ್, ಎ.ಎಲ್.ಟಿ., (ಸಿ.), ಶ್ರೀಮತಿ ಮಂಜುಳ ಸಿ. ಎ.ಎಲ್.ಟಿ.(ಜಿ.) ಇವರು ಶಿಬಿರದ ನಾಯಕರಾಗಿದ್ದರು.

## ಬಾಗಲಕೋಟೆ

ದಿನಾಂಕ 07-11-2012 ರಿಂದ 8-11-2012 ರ ವರೆಗೆ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ, ಕೇಂದ್ರೀಯ ಶಾಲೆ ಕಿಕ್ಕೇರಿ ಇಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಸಾಹಸಮಯ ಚಟುವಟಿಕೆ ಹಾಗೂ ಸಿಕರ್ಸ್ ಶಿಬಿರವನ್ನು ಜರುಗಿಸಲಾಯಿತು. ಶಾಲೆಯ ಕಬ್ಸ್ ಶಿಕ್ಷಕ ಶ್ರೀ ಶೈಲೇಂದ್ರ ಯಾದವ್, ಬುಲ್ ಬುಲ್ ಫ್ಲಾಕ್ ಲೀಡರ್, ಶ್ರೀಮತಿ ಮಂಜುಳಾ ಎಸ್. ಜಿಲ್ಲಾ ಕಾರ್ಯದರ್ಶಿ ಶ್ರೀ ಚಂದ್ರಶೇಖರ್, ಸಾವಳಗಿ, ಹಾಗೂ ಶಾಲೆಯ ಪ್ರಾಚಾರ್ಯರಾದ ಶ್ರೀ ರಾಮಮೂರ್ತಿ ಇವರ ಸಹಾಯದೊಂದಿಗೆ ಶಿಬಿರವನ್ನು ಜರುಗಿಸಲಾಯಿತು.

ದಿನಾಂಕ 7-11-2012 ರಂದು ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ಕೇಂದ್ರಿಯ ಶಾಲೆ ಕಿಕ್ಕೇರಿಯಲ್ಲಿ ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮವನ್ನು ಜರುಗಿಸಲಾಯಿತು. ಧ್ವಜ ಚೀಟಿಯ ಬಿಡುಗಡೆಯನ್ನು ಶಾಲೆಯ ಪ್ರಾಚಾರ್ಯರಾದ ಶ್ರೀ ರಾಮಮೂರ್ತಿ ನೆರವೇರಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎ. ಸಾವಳಗಿ ಧ್ವಜ ಚೀಟಿ ದಿನಾಚರಣೆಯ ಕುರಿತು ಶಿಬಿರದ ಮಕ್ಕಳಿಗೆ ತಿಳಿಹೇಳಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಘಟಕ ಶ್ರೀ ಎಸ್. ಹೆಚ್. ಹತ್ತಿಮತ್ತೂರ, ಶಾಲೆಯ ಶಿಕ್ಷಕ ಶ್ರೀ ಎನ್.ಬಿ. ಯಳ್ಳಿಗುತ್ತಿ ಹಾಗೂ ಇತರರು ಉಪಸ್ಥಿತರಿದ್ದರು.



ದಿನಾಂಕ 8-11-2012 ರಂದು ಹಾಸನ ಜಿಲ್ಲೆಯ ಅರಸೀಕೆರೆ ಕ್ಷೇತ್ರದ ಮಾನ್ಯ ಶಾಸಕರಾದ ಶ್ರೀ ಶಿವಲಿಂಗೇಗೌಡರು ಸಂಸ್ಥೆಯ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು. ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರಾದ ಶ್ರೀ ಬಿಳಿಚೌಡಯ್ಯ ಹಾಗೂ ಕ್ಷೇತ್ರ ಶಿಕ್ಷಣಾಧಿಕರಿ ಶ್ರೀ ನಟರಾಜ್ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.



ಯಾದಗಿರಿ ಜಿಲ್ಲಾಧಿಕಾರಿ ಕಛೇರಿ ಆವರಣದಲ್ಲಿ ಅಪರ ಜಿಲ್ಲಾಧಿಕಾರಿ ಶ್ರೀಮತಿ ಜಹೀರಾ ನಜೀಮ್ ಅವರು ಭಾರತ್ ಸ್ಕೌಟ್ಸ್&ಗೈಡ್ಸ್ ಧ್ವಜಚೀಟಿಗಳನ್ನು ಅನಾವರಣಗೊಳಿಸಿದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ರಾಘವೇಂದ್ರ, ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎಂ. ಪಟ್ಟೇದಾರ, ತರಬೇತುದಾರ ಶ್ರೀ ರಾಜೇಂದ್ರ, ಶ್ರೀ ಬಾಬುದೋಖಾ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



ಹಾವೇರಿ ಜಿಲ್ಲೆಯ ಶ್ರೀ ಮ.ನಿ.ಪ್ರ ಚನ್ನವೀರೇಶ್ವರ ವಿರಕ್ತಮಠ ಶಿವಬಸವ ಸ್ವಾಮಿಯವರು ಸ್ಕೌಟ್ಸ್ ಧ್ವಜಚೀಟಿಗಳನ್ನು ಬಿಡುಗಡೆ ಮಾಡಿದರು. ಶ್ರೀ ವಿ.ವಿ. ಸಾಲಿಮಠ, ಬಿ.ಇ.ಓ ಹಾಗೂ ಎ.ಡಿ.ಸಿ(ಸ್ಕೌ) ಹಾನಗಲ್ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ದಾವಣಗೆರೆಯಲ್ಲಿ ಇತ್ತೀಚೆಗೆ ನಡೆದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಚಿಗಟೇರಿಯವರು ಸಂಸ್ಥೆಯ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು. ಜಿಲ್ಲಾಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಚಿಕ್ಕಮಗಳೂರಿನಲ್ಲಿ ಜಿಲ್ಲೆಯಲ್ಲಿ ಸಂಸ್ಥೆಯ ಧ್ವಜ ಚೀಟಿಗಳನ್ನು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಎಂ.ಎಲ್. ಮೂರ್ತಿ ರವರು ಬಿಡುಗಡೆಗೊಳಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿ ಹಾಗೂ ಜಿಲ್ಲಾ ಸಂಸ್ಥೆಯ ಇತರ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 27-11-2012 ರಂದು ರಾಯಚೂರು ಜಿಲ್ಲೆಯ ಮಾನವಿ ತಾಲ್ಲೂಕಿನ ಶಾರದಾ ವಿದ್ಯಾನಿಕೇತನ ಶಾಲೆಯಲ್ಲಿ ಹಮ್ಮಿಕೊಳ್ಳಲಾಗಿದ್ದ ಮಾಹಿತಿ ಶಿಬಿರವನ್ನು ಮಾನ್ಯ ಶಾಸಕರಾದ ಶ್ರೀ ಜಿ. ಹಂಪಯ್ಯನಾಯಕರವರು ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.




ಇತ್ತೀಚೆಗೆ ಜಪಾನ್‌ನಲ್ಲಿ ನಡೆದ **"Road to Japan"** ಕಾರ್ಯಕ್ರಮದಲ್ಲಿ ರಾಯಚೂರಿನ ರೋವರ್ ಶ್ರೀ ಪ್ರಸನ್ನಗುಡಿ ಭಾಗವಹಿಸಿದ್ದರು.



ಕಾರವಾರ ಜಿಲ್ಲೆಯ ಹೊನ್ನಾವರದ ದಂಡಾಧಿಕಾರಿ ಹಾಗೂ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಗಾಯಿತ್ರಿ ನಾಯಕ್‌ರವರ ಕಛೇರಿಯಲ್ಲಿ ಸಂಸ್ಥೆಯ ಧ್ವಜಚೀಟಿಗಳನ್ನು ಬಿಡುಗಡೆ ಮಾಡಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಜಿ.ಜಿ. ಸಭಾಹಿತ್ ಹಾಗೂ ಜಿಲ್ಲಾ ಸಂಸ್ಥೆಯ ಇತರ ಪದಾಧಿಕಾರಿಗಳನ್ನು ಕಾಣಬಹುದು.



ಧಾರವಾಡ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ "ರಾಷ್ಟ್ರೀಯ ಸಂಕಲ್ಪದಿನದ" ಅಂಗವಾಗಿ ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿದ ಜಿಲ್ಲಾಧಿಕಾರಿಗಳಾದ ಶ್ರೀ ಚೀಳಗಿಯವರು ಎಲ್ಲರಿಗೂ ಪ್ರತಿಜ್ಞೆಯನ್ನು ಬೋಧಿಸುತ್ತಿರುವುದು.




ದಿನಾಂಕ 27-11-2012ರಂದು ಯಾದಗಿರಿಯಲ್ಲಿ ನಡೆದ ಸ್ಕೌಟರ್-ಗೈಡರ್‌ಗಳ ಸಮಾವೇಶವನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ರಾಮಾಂಜನೇಯ ರವರು ಉದ್ಘಾಟಿಸಿದರು. ಶ್ರೀ ಮಜಾರ್ ಹುಸೈನ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀಮತಿ ನಾಗರತ್ನ ಅನಪೂರ, ಜಿಲ್ಲಾ ಆಯುಕ್ತರು (ಗೈಡ್ಸ್) ಹಾಗೂ ಇತರರನ್ನು ಕಾಣಬಹುದು.



ರಾಮನಗರ ಜಿಲ್ಲೆಯ ದೊಡ್ಡಮಳೂರು ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನೂತನ ಗೈಡ್‌ದಳ ಉದ್ಘಾಟಿಸಲಾಯಿತು. ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಎಂ.ಎ. ಚೆಲ್ಲಯ್ಯ ಮತ್ತು ಶ್ರೀಮತಿ ಬಿ.ವಿ. ರಾಮಲತಾರವರೊಂದಿಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಶಿವನಂಜಪ್ಪರವನ್ನು ಕಾಣಬಹುದು.



ದಿನಾಂಕ 07-11-2012ರಂದು ಬಾಗಲಕೋಟ ಜಿಲ್ಲೆಯಲ್ಲಿ ಸಂಸ್ಥೆಯ ಧ್ವಜಚೀಟಿಗಳನ್ನು ಶ್ರೀ ರಾಮಮೂರ್ತಿ, ಪ್ರಾಂಶುಪಾಲರು ಬಿಡುಗಡೆ ಮಾಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಸಾವಳಗಿ ಹಾಗೂ ಇತರರನ್ನು ಕಾಣಬಹುದು.



**Participants are seen at the State Level Mapping and Badge Instructors and Badge Examiners Course held from 3rd to 7th Dec 2012 at Dr. Annie Besant State Training and Camping Centre, Doddaballapur.**



**Participants are seen at the Basic Course for Rover Scout Leaders held from 8th to 15th December 2012 at Dr. Annie Besant Park State Training and Camping Center Doddaballapur.**





ಇತ್ತೀಚೆಗೆ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ್ ಸ್ಥಳಿಯ ಸಂಸ್ಥೆ ಆಶ್ರಯದಲ್ಲಿ ನಡೆದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದಲ್ಲಿ ಉತ್ತಮ ಗೈಡರ್ಸ್ ಹಾಗೂ ರಾಜ್ಯ ಪುರಸ್ಕಾರ ಪಡೆದ ಸ್ಕೌಟ್ಸ್‌ಗಳನ್ನು ಸನ್ಮಾನಿಸಿ ಗೌರವಿಸಲಾಯಿತು.



ಇತ್ತೀಚೆಗೆ ಹಾವೇರಿಯಲ್ಲಿ ನಡೆದ ತಾಲ್ಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಶ್ರೀ ಶ್ರೀ ಮ.ನಿ.ಪ್ರ ಚನ್ನವೀರೇಶ್ವರ ವಿರಕ್ತಮಠ ಶಿವಬಸವ ಸ್ವಾಮೀಜಿಯವರು ದೀಪ ಬೆಳಗಿಸಿ ಉದ್ಘಾಟಿಸಿದರು. ಶ್ರೀ ವಿ.ವಿ. ಸಾಲಿಮಠ, ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌ) ಹಾನಗಲ್, ಶ್ರೀ ಎಸ್.ಎಫ್. ಕೆಂಗೆಮ್ಮನವರು, ತಾಲ್ಲೂಕ ದೈಹಿಕ ಶಿಕ್ಷಣಾಧಿಕಾರಿ, ಶ್ರೀ ಅಶೋಕಸಣ್ಣವೀರಪ್ಪ ಹಾಗೂ ಶ್ರೀ ಶೇಖ್ ಸೂರಣಗಿ, ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌ) ರವರನ್ನು ಕಾಣಬಹುದು.



ಇತ್ತೀಚೆಗೆ ಧಾರವಾಡದಲ್ಲಿ ನಡೆದ ಜಿಲ್ಲಾ ಮಟ್ಟದ ಕಬ್ಸ್-ಬುಲ್‌ಬುಲ್ಸ್ ಉತ್ಸವದ ಸಮಾರೋಪ ಸಮಾರಂಭದಲ್ಲಿ ಮಾತನಾಡುತ್ತಿರುವ ಬುಲ್‌ಬುಲ್. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ವ್ಹಿ ಕಟ್ಟಿ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಎಸ್.ವಿ. ಮೊರಬರವರನ್ನು ಕಾಣಬಹುದು.



ದಿನಾಂಕ 7-12-2012 ರಿಂದ 8-12-2012 ರವರೆಗೆ ಉಡುಪಿಜಿಲ್ಲೆ ಕಾರ್ಕಳ ಸ್ಥಳೀಯ ಸಂಸ್ಥೆಯ ವತಿಯಿಂದ ನಡೆದ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ ಹಾಗೂ ಕಬ್ಸ್-ಬುಲ್‌ಬುಲ್ಸ್ ಉತ್ಸವವನ್ನು ಶ್ರೀ ಕೆ. ರವೀಂದ್ರ ಭಟ್, ಕೋಶಾಧ್ಯಕ್ಷರು, ದೇವಳ ಎಜ್ಯುಕೇಶನ್ ಟ್ರಸ್ಟ್ ಇವರು ಉದ್ಘಾಟಿಸಿದರು. ಚಿತ್ರದಲ್ಲಿ ಇತರ ಜಿಲ್ಲಾ ಮತ್ತು ತಾಲ್ಲೂಕು ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.




ದಿನಾಂಕ 11-12-12ರಿಂದ 15-12-2012 ರವರೆಗೆ ಗುಲ್ಬರ್ಗ ಜಿಲ್ಲಾ ಸಂಸ್ಥೆ ಹಾಗೂ ಬಸಂತಸೇನಾ ವಾಸವದತ್ತಾ ವಿದ್ಯಾವಿಹಾರ ಶಾಲೆ ಸೇಡಂ ಇವರ ಸಂಯುಕ್ತಾಶ್ರಯದಲ್ಲಿ ಜಿಲ್ಲಾ ಮಟ್ಟದ ಪಟಾಲಂ ನಾಯಕರ ಶಿಬಿರ ನಡೆಯಿತು. ಇದರ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದ ಗಣ್ಯ ವ್ಯಕ್ತಿಗಳು ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು.



ದಿನಾಂಕ 14-12-2012 ರಿಂದ 16-12-2012ರವರೆಗೆ ಕೊಂಡಜ್ಜಿ ಬಸಪ್ಪ ರಾಜ್ಯ ತರಬೇತಿ ಕೇಂದ್ರದಲ್ಲಿ ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ಏರ್ಪಡಿಸಿದ ಕಬ್ಸ್-ಬುಲ್‌ಬುಲ್ಸ್‌ಗಳ ಸಿಕ್ಸರ್ ಕ್ಯಾಂಪ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳ ಪಟಾಲಂ ನಾಯಕರ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗೂ ಇತರರನ್ನು ಕಾಣಬಹುದು.



ದಿನಾಂಕ 16-11-2012ರಂದು ಮೈಸೂರು ದಕ್ಷಿಣ ವಲಯ ವತಿಯಿಂದ ನಡೆದ ಸ್ಕೌಟ್ಸ್-ಗೈಡ್ಸ್ ಸಪ್ತಾಹ ಕಾರ್ಯಕ್ರಮದ ಸಂದರ್ಭದಲ್ಲಿ ಸಸಿ ನೆಡುತ್ತಿರುವುದು.



ಬೆಳಗಾವಿ ಜಿಲ್ಲೆ ರಾಮದುರ್ಗ ಸ್ಥಳೀಯ ಸಂಸ್ಥೆ ನೂತನ ಕಾರ್ಯಾಲಯದ ಉದ್ಘಾಟನೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಆರ್.ಟಿ. ಬಳಿಗಾರ್ ರವರು ಬಿ.ಪಿ. ಮತ್ತು ಲೇಡಿ ಬಿ.ಪಿ.ರವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವುದರೊಂದಿಗೆ ನೆರವೇರಿಸಿದರು. ಚಿತ್ರದಲ್ಲಿ ದೈಹಿಕ ಶಿಕ್ಷಣ ವಿಷಯಪರಿವೀಕ್ಷಕರಾದ ಶ್ರೀ ಆರ್.ಎಸ್. ವಾಸನದ ಮತ್ತು ಇತರ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಶಿವಮೊಗ್ಗ ಸ್ಥಳೀಯ ಸಂಸ್ಥೆ ವತಿಯಿಂದ ನಡೆಸಿದ ಚಿತ್ರಕಲಾ ಸ್ಪರ್ಧೆಯಲ್ಲಿ ಭಾಗವಹಿಸಿದ ವಿವಿಧ ಶಾಲೆಯ ಗೈಡ್ಸ್‌ಗಳು.

ದಿನಾಂಕ : 27-11-2012 ರಂದು ರಾಷ್ಟ್ರೀಯ ವಿಪತ್ತು ಕಡಿಮೆಗೊಳಿಸುವ ಕಾರ್ಯಕ್ರಮ ಹಾಗೂ ರ್‍ಯಾಲಿಯಲ್ಲಿ ಜಿಲ್ಲೆಯ ಸ್ಕೌಟ್ ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ಇದರ ಅಂಗವಾಗಿ ನಡೆದ ಪಥಚಲನ ನಗರದ ಅಂಬೇಡ್ಕರ್ ವೃತ್ತದಿಂದ ಪ್ರಾರಂಭವಾಗಿ ಶ್ರೀ ಬಸವೇಶ್ವರ ಕಾಲೇಜಿನ ಮೈದಾನದಲ್ಲಿ ಮುಕ್ತಾಯಗೊಂಡಿತ್ತು. ಗೃಹ ರಕ್ಷಕ ದಳ ಹಾಗೂ ಅಗ್ನಿ ಶಾಮಕದಳದಿಂದ, ಅಣಕು ಪ್ರದರ್ಶನ ತೋರಿಸಲಾಯಿತು.

## ಶಿವಮೊಗ್ಗ

ದಿನಾಂಕ 24-11-2012 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿವಮೊಗ್ಗ ಸ್ಥಳೀಯ ಸಂಸ್ಥೆಯ ವತಿಯಿಂದ ಜಿಲ್ಲಾ ಸ್ಕೌಟ್ ಭವನದಲ್ಲಿ ಒಂದು ದಿನದ ಕಬ್-ಬುಲ್ ಬುಲ್‌ಗಳ ಶಿಬಿರವನ್ನು ಆಯೋಜಿಸಲಾಗಿತ್ತು. ಕಬ್, ಬುಲ್ ಬುಲ್‌ಗಳನ್ನು ವಿವಿದ ಗುಂಪುಗಳಾಗಿ ವಿಂಗಡಿಸಲಾಯಿತು. ನಂತರ ಕಬ್‌ಗಳಿಗೆ ಹಾಗೂ ಬುಲ್ ಬುಲ್‌ಗಳಿಗೆ ಗ್ರೀಟಿಂಗ್ ಮತ್ತು ಧ್ವಜಾರೋಹಣ ಮಾಡಲಾಯಿತು ಕಬ್ ಗಳಿಗೆ "ಜಂಗಲ್ ಸ್ಟೋರಿ" ಹಾಗೂ "ಬುಲ್‌ಬುಲ್" ಗಳಿಗೆ 'ತಾರಾ ಸ್ಟೋರಿ' ತಿಳಿಸಲಾಯಿತು.

ನಂತರ ಪ್ರತಿಜ್ಞೆ ,ನಿಯಮ, ಪ್ರಾರ್ಥನೆ, ದಿನಕ್ಕೊಂದು ಉಪಕಾರ, ಗುರುತು, ವಂದನೆ, ಎಡಗೈ ಹಸ್ತಲಾಘವ, ಧ್ವಜಗೀತೆ ಕಲಿಸಲಾಯಿತು. ಭೋಜನದ ನಂತರ ಕಬ್ಬಿಂಗ್ ಮೂಲದ "ಕಾ" ಡ್ಯಾನ್ಸ್, ಮೌಗ್ಲಿ ಬೇಟೆ, ಬಾಲೂ ಡ್ಯಾನ್ಸ್ ಕಲಿಸಲಾಯಿತು. ಬುಲ್ ಬುಲ್‌ಗಳಿಗೆ ವಿವಿದ ಆಟಗಳನ್ನು ಆಡಿಸಲಾಯಿತು.

ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಹಿರಿಯ ಸ್ಕೌಟರ್ ಶ್ರೀ ಆರ್.ಕೆ. ರಾಮ್ ಸಿಂಗ್ ವಹಿಸಿದ್ದರು. ಶ್ರೀ ವೈ.ಆರ್. ವೀರೇಶಪ್ಪ ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ನಾಗೇಂದ್ರಾಚಾರ್ ಕಬ್ ನಾಯಕರಾಗಿ ವರದಿ ನೀಡಿದರು. ಕೆಲವು ಕಬ್-ಬುಲ್ ಬುಲ್‌ಗಳು ತಮ್ಮ ಅನುಭವವನ್ನು ಹಂಚಿಕೊಂಡರು. ಅದ್ಯಕ್ಷರಾದ ಶ್ರೀ ಆರ್. ಕೆ. ರಾಮ್‌ಸಿಂಗ್ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳಿಗೆ ಹಿತವಚನ ನೀಡಿದರು. ಶ್ರೀ ಎ.ವಿ. ರಾಜೇಶ್ ರವರು ಎಲ್ಲರನ್ನು ವಂದಿಸಿದರು. ಈ ಶಿಬಿರದಲ್ಲಿ 80 ಕಬ್‌ಗಳು, 113 ಬುಲ್ ಬುಲ್‌ಗಳು 5 ಜನ ಶಿಕ್ಷಕರು ಭಾಗವಹಿಸಿದ್ದರು.

## ಬೀದರ್

ದಿನಾಂಕ 27-11-2012 ರಂದು ರಾಷ್ಟ್ರೀಯ ವಿಪತ್ತು ಕಡಿಮೆಗೊಳಿಸುವ ದಿನಾಚರಣೆಯ ರ್‍ಯಾಲಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳೊಂದಿಗೆ ಭಾಗವಹಿಸಲಾಯಿತು. ಹಾಗೂ ರಾಷ್ಟ್ರೀಯ ವಿಪತ್ತು ಕಡಿಮೆ ಗೊಳಿಸುವ ಪ್ರಬಂಧ ಸ್ಪರ್ಧೆಯಲ್ಲಿ ಕುಮಾರ ವಿಷ್ಣು ಸಂಗಶೆಟ್ಟಿ ಸ್ಕೌಟ್ ಕಲ್ಯಾಣ ಪ್ರೌಢಶಾಲೆ ಬೀದರ ದ್ವಿತೀಯ ಬಹುಮಾನವನ್ನು ಪಡೆದಿರುತ್ತಾನೆ.

ದಿನಾಂಕ 7-12-2012 ರಿಂದ 9-12-2012 ರ ವರೆಗೆ ಜಿಲ್ಲಾ ಮಟ್ಟದ ರಾಜ್ಯ ಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರವನ್ನು ನಡೆಸಲಾಯಿತು. ಸ್ಕೌಟ್ ವಿಭಾಗಕ್ಕೆ ಶ್ರೀ ಅಬ್ದುಲ್ ಹಫೀಜ ಹಾಗೂ ಗೈಡ್ ವಿಭಾಗಕ್ಕೆ ಶ್ರೀಮತಿ ವಿದ್ಯಾವತಿ ಸಾನೆ ನಾಯಕರಾಗಿದ್ದರು 200 ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ : 1-12-2012 ರಂದು ಕನಕದಾಸರ ಜಯಂತಿಯನ್ನು ಸರಕಾರದ ಆದೇಶದಂತೆ ಸರಳ ರೀತಿಯಲ್ಲಿ ಆಚರಿಸಲಾಯಿತು. ಇದರಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## ಹಾವೇರಿ

ದಿನಾಂಕ 01-11-2012 ರಂದು ಧ್ವಜ ದಿನಾಚರಣೆ ಮತ್ತು ತಾಲ್ಲೂಕು ಮಟ್ಟದ ಸ್ಕೌಟರ್-ಗೈಡರ್ ಸಮಾವೇಶವು ಕೆ.ಜಿ.ಎಸ್. ಮತ್ತು ಎಂ.ಕೆ.ಬಿ.ಎಸ್. ಶಾಲೆ ಆಲೂರಿನಲ್ಲಿ ನಡೆಯಿತು. ಕಾರ್ಯಕ್ರಮದ ಸಾನಿಧ್ಯ ವಹಿಸಿದ್ದ ಚನ್ನವೀರೇಶ್ವರ ವಿರಕ್ತಮಠ ಶ್ರೀ ಶಿವಬಸವ ಸ್ವಾಮೀಜಿ ರವರು ದೀಪ ಬೆಳಗಿಸುವುದರೊಂದಿಗೆ ಕಾರ್ಯಾಗಾರ ಉದ್ಘಾಟನೆ ಮಾಡಿದರು. ಹಾಗೂ ಸ್ಕೌಟ್-ಗೈಡ್ ಧ್ವಜ ಚೀಟಿ ಬಿಡುಗಡೆ ಮಾಡಿದರು.

ಅಧ್ಯಕ್ಷತೆ ವಹಿಸಿದ ಶ್ರೀ ವಿ.ವಿ. ಸಾಲೀಮಠ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಎ.ಡಿ.ಸಿ.(ಎಸ್.) ಹಾನಗಲ್ಲರವರು ಶಾರೀರಿಕ ಹಾಗೂ ಮಾನಸಿಕ ಆರೋಗ್ಯದೊಂದಿಗೆ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಸನಗೊಳಿಸುವಲ್ಲಿ ಸ್ಕೌಟ್ಸ್-ಗೈಡ್ಸ್ ಮುಖಾಂತರ ಶಿಕ್ಷಕರು ವಿಶೇಷ ತರಬೇತಿ ನೀಡಬೇಕೆಂದು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಅಶೋಕ ಸಣ್ಣ ವೀರಪ್ಪನವರ ಶ್ರೀ ಎಸ್.ಎಫ್. ಕೆಂಗಮ್ಮನವರ ಪಿ.ಇ.ಓ. ಹಾನಗಲ್ಲ ಶ್ರೀ ಜಿ.ಟಿ. ಹಂಚಿನ ಮನಿ ಮುಖ್ಯೋಪಾಧ್ಯಾರು, ಜೆ.ವಿ. ವರ್ಣಕರ ಮುಂತಾದವರು ಭಾಗವಹಿಸಿದ್ದರು. ಕಾರ್ಯಗಾರದ ನಾಯಕರಾಗಿ ಶ್ರೀ ಎ.ಎಲ್. ಶೇಖಸೂರಣಗಿ, ಎಲ್.ಟಿ.(ಎಸ್.) ಡಿ.ಓ.ಸಿ., ಕಾರ್ಯ ನಿರ್ವಹಿಸಿದರು. ಕಾರ್ಯಕ್ರಮದಲ್ಲಿ 38 ಸ್ಕೌಟ್ಸ್ ಮತ್ತು 23 ಗೈಡ್ಸ್‌ಗಳು ಭಾಗವಹಿಸಿದ್ದರು.

## ಕಾರವಾರ

ದಿನಾಂಕ 06-11-2012 ರಂದುಅಂಕೋಲಾ ಸ್ಥಳೀಯ ಸಂಸ್ಥೆಯ ಸಭೆ ಹಾಗೂ ಸ್ಕೌಟ್ ಶಿಕ್ಷಕ/ಗೈಡ್ ಶಿಕ್ಷಕಿಯರ ಕಾರ್ಯಾಗಾರ ನಡೆಯಿತು. ಈ ಕಾರ್ಯಾಗಾರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಉದ್ಘಾಟಿಸಿ ಮಾತನಾಡಿ ತರಬೇತಿ ಪಡೆದ ಶಿಕ್ಷಕ/ಶಿಕ್ಷಕಿಯರು ದಳವನ್ನು ಪ್ರಾರಂಭಿಸಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸಮುದಾಯ ಅಭಿವೃದ್ಧಿ, ಸ್ವಚ್ಛತಾ ಕಾರ್ಯಕ್ರಮ, ಮುಂತಾದ ಕಾರ್ಯಕ್ರಮ ಹಮ್ಮಿಕೊಳ್ಳಬೇಕೆಂದು ತಿಳಿಸಿದರು. ದೈಹಿಕ ಶಿಕ್ಷಣಾಧಿಕಾರಿಗಳು ಸಹ ಉಪಸ್ಥಿತರಿದ್ದರು. ಶ್ರೀ ಬಿ.ಡಿ. ಫರ್ನಾಂಡೀಸ್ ಜಿಲ್ಲಾ ಕಾರ್ಯದರ್ಶಿ ಹಾಗೂ ಶ್ರೀಮತಿ ಭಾರತಿ ಡಾಯಸ್‌ರವರು ಶಿಬಿರಾರ್ಥಿಗಳಿಗೆ ತೃತೀಯ ಸೋಪಾನ ಪರೀಕ್ಷಾ ಶಿಬಿರ, ಪ್ರಧಾನ ಮಂತ್ರಿ ಪಾರಿತೋಷಕ, ಗಂಟುಗಳು ಪ್ರಥಮ ಚಿಕಿತ್ಸೆಗಳ ಬಗ್ಗೆ ಮಾಹಿತಿ ನೀಡಿದರು. ಎಲ್.ಎ. ಕಾರ್ಯದರ್ಶಿ ಶ್ರಿ ದೇವರಾಜ್ ಗೊಳಿಕಟ್ಟೆಯವರು ಎಲ್ಲರನ್ನು ವಂದಿಸಿದರು.

ದಿನಾಂಕ 7-11-2012 ರಂದು ಜಿಲ್ಲಾ ಮಟ್ಟದ ಸ್ಕೌಟ್-ಗೈಡ್ ಸಪ್ತಾಹದ ಸಂದರ್ಭದಲ್ಲಿ ಭಟ್ಕಳ ಕ್ಷೇತ್ರದ ಶಾಸಕರಾದ ಶ್ರೀ ಜೆ.ಡಿ. ನಾಯ್ಕರವರು ಸ್ಕೌಟ್-ಗೈಡ್ ಸ್ಟಿಕ್ಕರ್ ಬಿಡುಗಡೆ ಮಾಡಿ, ಸ್ಕೌಟ್ಸ್-ಗೈಡ್ಸ್‌ಗಳಿಗೆ ಶಿಸ್ತು, ಮಾನವೀಯ ಮೌಲ್ಯ ಹಾಗೂ ಸಮಾಜ ಸೇವ ಮನೋಭಾವ ಬೆಳೆಸುವಲ್ಲಿ ಸ್ಕೌಟ್ ಸಂಸ್ಥೆಯು ಅತ್ಯುತ್ತಮ ಎಂದರು. ಹೊನ್ನಾವರ ತಾಲ್ಲೂಕಿನ ದಂಡಾಧಿಕಾರಿಗಳಾದ ಶ್ರೀಮತಿ ಗಾಯತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ವಿ.ಆರ್. ನಾಯರ್, ಪೋಲಿಸ್ ಅಧಿಕಾರಿ ಶ್ರಿ ಆಂಥೋನಿ ಫಾ ಲೀಜಿ ಥಾಮಸ್, ಅಕ್ಷರ ದಾಸೋಹ ನೋಡಲ್ ಅಧಿಕಾರಿ ಶ್ರೀ ಜಿ.ಎಸ್. ನಾಯ್ಕರ್ ಉಪಸ್ಥಿತರಿದ್ದರು. ಜಿಲ್ಲೆಯ ಪದಾಧಿಕಾರಿಗಳಾದ ಶ್ರೀ ಜಿ.ಜಿ. ಸಭಾಹಿತ್, ಶ್ರೀ ಬಿ.ಡಿ. ಫರ್ನಾಂಡಿಸ್, ಶ್ರೀ ಆರ್.ಟಿ. ಹೆಬ್ಬಾರ, ಎ.ಎಸ್.ಓ.ಸಿ., ಭಾರತಿ ಡಾಯಸ್ ಮಾರ್ಥೋಮಾ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಉಪಸ್ಥಿತರಿದ್ದರು.

ದಿನಾಂಕ 8-11-2012 ರಿಂದ 10-11-2012 ರ ವರೆಗೆ ಕಾರವಾದ ಗುರುಭವನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಗಳಿಗೆ ತೃತೀಯ ಸೋಪಾನ ಟೆಸ್ಟಿಂಗ್ ಕ್ಯಾಂಪ್ ನಡೆಯಿತು. ಇದರಲ್ಲಿ ಒಟ್ಟು 179 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು 19 ಸ್ಕೌಟ್ ಮಾಸ್ಟರ್/ಗೈಡ್ ಕ್ಯಾಪ್ಟನ್ಸ್ ಹಾಗೂ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಕಾರವಾರದ ತಾಲ್ಲೂಕಿನ ದಂಡಾಧಿಕಾರಿಗಳಾದ ಶ್ರೀ ಸಾಜಿದ ಮುಲ್ಲಾರವರು ನೆರವೇರಿಸಿ, ಸ್ಕೌಟ್-ಗೈಡ್ ಸದಸ್ಯತ್ವ ಪಡೆದಿರುವ ನೀವುಗಳು ಭಾಗ್ಯವಂತರು ಸಂಚಲ ಮನಸ್ಸಿಗೆ ಸಾತ್ವಿಕ ಪರಿವರ್ತನೆಯನ್ನು ನೀಡುವ ಈ ಚಳುವಳಿಗಳು ಶ್ಲಾಘನೀಯ ಎಂದರು.

ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಶ್ರೀ ಎಂ. ರೇವಣ್ಣಸಿದ್ದಪ್ಪನವರು ಅಧ್ಯಕ್ಷತೆಯನ್ನು ವಹಿಸಿದ್ದರು. ಎ.ಎಸ್.ಓ.ಸಿ. ಶ್ರೀಮತಿ ಭಾರತಿ ಡಾಯಸ್ ಪ್ರಾಸ್ತಾವಿಕ ನುಡಿಗೈದರು. ಸ್ಕೌಟ್ ನಾಯಕ ಮುಲ್ಲಾ ಶಿಬಿರದ ವಿವರ ಒದಗಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ರವರು ಸರ್ವರನ್ನು ಸ್ವಾಗತಿಸಿದರು. ಶ್ರೀ ಗಣೇಶ ಬಿಟ್ಟಣ್ಣನವರ ನಿರೂಪಿಸಿದರು.

ಶಿಬಿರದ 2ನೇ ದಿನ ಶಿಬಿರಾಗ್ನಿ ಕಾರ್ಯಕ್ರಮವನ್ನು ಮಾಲಾದೇವಿ ಮೈದಾನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಇದರ ಉದ್ಘಾಟನೆಯನ್ನು ಶಿವಾಜಿ ಶಿಕ್ಷಣ ಮಹಾ ವಿದ್ಯಾಲಯದ ಪ್ರಾಚಾರ್ಯರಾದ ಡಾ॥ ಶಿವಾನಂದ ನಾಯ್ಕರವರು ನೆರವೇರಿಸಿ ಕೊಟ್ಟರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಆಯುಕ್ತರಾದ ಶ್ರೀಮತಿ ಲಲಿತಾ ಹೆಗಡೆಯವರು ವಹಿಸಿದ್ದರು. ಜಿಲ್ಲಾ ಕೋಶಾಧ್ಯಕ್ಷರಾದ ಶ್ರೀ ಆರ್.ಟಿ. ಹೆಬ್ಬಾರ, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಕಾರವಾರ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಈ ಶಿಬಿರವನ್ನು ಸಂಘಟಿಸಿದ ಎ.ಎಸ್.ಓ.ಸಿ., ಶ್ರೀಮತಿ ಭಾರತಿ ಡಾಯಿಸ್ ಉಪಸ್ಥಿತರಿದ್ದರು.

# ಚಿಕ್ಕಮಗಳೂರು

ದಿನಾಂಕ 10-11-2012 ರಂದು ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾಮಟ್ಟದಲ್ಲಿ ಸಮುದಾಯ ಸೇವಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಜಿಲ್ಲೆಯ ವಿವಿದ ತಾಲ್ಲೂಕುಗಳಿಂದ 70 ಗೈಡ್ಸ್, 126 ಸ್ಕೌಟ್ಸ್‌ಗಳು ಹಾಗೂ 8 ಗೈಡರ್ಸ್, 12 ಸ್ಕೌಟರ್ಸ್‌ಗಳು ಭಾಗವಹಿಸಿದ್ದರು. ನಗರದ ಶ್ರೀ ಬೋಳರಾಮೇಶ್ವರ ದೇವಸ್ಥಾನದ ಆವರಣದಲ್ಲಿ ಜಿಲ್ಲಾ ಆಟದ ಮೈದಾನ, ವಾರ್ತಾ ಇಲಾಖೆಯ ಅವರಣ, ನಗರಸಭೆ ಕಛೇರಿ ಆವರಣದಲ್ಲಿ ಸ್ಕೌಟ್ಸ್- ಗೈಡ್ಸ್‌ಗಳನ್ನು ತಂಡಗಳಾಗಿ ವಿಂಗಡಿಸಿ ಸ್ಕೌಟರ್ಸ್ ಗೈಡರ್ಸ್ ಗಳೊಂದಿಗೆ ಸ್ವಚ್ಛತೆಯನ್ನು ಮಾಡಲಾಯಿತು.

ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಎಂ.ಎನ್. ಷಡಕ್ಷರಿ. ಜಿಲ್ಲಾ ಮುಖ್ಯ ಆಯುಕ್ತರು ನೆರವೇರಿಸಿ ಮಾತನಾಡಿ. ಸಮುದಾಯ ಸೇವಾ ಕಾರ್ಯಕ್ರಮದ ಮಹತ್ವವನ್ನು ತಿಳಿಸಿದರು. ಸಮಾರಂಭದಲ್ಲಿ ಶ್ರೀಮತಿ ಸಂಧ್ಯಾರಾಣಿ. ಜಿಲ್ಲಾ ತರಬೇತಿ ಆಯುಕ್ತರು, ರಾಘವೇಂದ್ರ ಎಸ್.ಎಂ. ಶ್ರೀ ನೀಲಕಂಠಾಚಾರ್, ಹಾಗೂ ಎಲ್.ಟಿ. ಲೋಕೇಶ್ ಎ.ಎಸ್.ಓ.ಸಿ., ಉಪಸ್ಥಿತರಿದ್ದರು. ಶ್ರೀ ಕಿರಣ್ ಕುಮಾರ್, ಡಿ.ಓ.ಸಿ., ಮಕ್ಕಳಿಗೆ ಊಟದ ವ್ಯವಸ್ಥೆ, ಬೌತಿಕ ವ್ಯವಸ್ಥೆ ಮಾಡಿಕೊಟ್ಟರು.

ಸಮಾರೋಪ ಸಮಾರಂಭವು ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ಶ್ರೀ ಎಂ.ಎನ್. ಷಡಕ್ಷರಿ, ಜಿಲ್ಲಾ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ, ಶ್ರೀ ಎ.ಎನ್. ವಾಹೇಶ್, ಜಿಲ್ಲಾ ಆಯುಕ್ತರು (ಸ್ಕೌಟ್) ರವರ ಉಪಸ್ಥಿತಿಯಲ್ಲಿ ನಡೆಯಿತು. ಶ್ರೀ ನೀಲಕಂಠಾಚಾರ್, ಹಿರಿಯ ಸ್ಕೌಟ್ ಮಾಸ್ಟರ್ ಸ್ವಾಗತಿಸಿ, ಶ್ರೀಮತಿ ಜ್ಯೋತಿ ಗೈಡರ್ ವಂದಿಸಿದರು.

# ಯಾದಗಿರಿ

ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪಠ್ಯದ ಜತೆ ಪಠ್ಯೇತರ ಚಟುವಟಿಕೆಗಳಲ್ಲೂ ಭಾಗವಹಿಸಲು ಶಿಕ್ಷಕರು ಪ್ರೋತ್ಸಾಹ ನೀಡಬೇಕು ಎಂದು ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕ ಶ್ರೀ ರಾಮಾಂಜನೇಯ ಹೇಳಿದರು. ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಘಟನೆಯ ವತಿಯಿಂದ ನಗರದ ಡಾನ್‌ಬಾಸ್ಕೋ ಶಿಕ್ಷಣ ಸಂಸ್ಥೆಯ ಸಭಾಭವನದಲ್ಲಿ ಬುಧವಾರ ಹಮ್ಮಿಕೊಂಡಿದ್ದ ಒಂದು ದಿನದ ತರಬೇತಿ ಕಾರ್ಯಗಾರವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಮಜರ್ ಹುಸೇನ ಮಾತನಾಡಿ, ನೂತನ ಜಿಲ್ಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತನ್ನ ಕಾರ್ಯವ್ಯಾಪ್ತಿ ವಿಸ್ತಾರವಾಗಲು ಅನುಕೂಲಕರ ವಾತಾವರಣವಿದೆ. ಇಲಾಖೆಯಿಂದ ಸಂಪೂರ್ಣ ಸಹಕಾರ ನೀಡಲಾಗುವುದು ಎಂದು ಭರವಸೆ ನೀಡಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ನಾಗರತ್ನ ಅನಪುರ ಮಾತನಾಡಿ. ಜಿಲ್ಲೆಯಲ್ಲಿ ಸಂಘಟನೆ ಬೆಳವಣಿಗೆಗೆ ಹಿರಿಯರು ಹಾಗೂ ಯುವಕರು ಎಲ್ಲರೂ ಒಗ್ಗೂಡಿ ಕೆಲಸ ಮಾಡಬೇಕಾಗಿದೆ ಎಂದು ಹೇಳಿದರು.

ಸ್ಕೌಟ್ಸ್ ಮತ್ತು ಗೈಡ್ಸ್ ಸಂಘಟನೆ ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎಂ. ಪಟ್ಟೇದಾರ ಹಾಗೂ ಅಜೀಂ ಪ್ರೇಮಜಿ ಫೌಂಡೇಶನ್ ಅಧಿಕಾರಿ ಶ್ರೀ ಉಮಾಶಂಕರ್ ಮಾತನಾಡಿದರು. ಗುಲ್ಬರ್ಗಾ ಜಿಲ್ಲಾ ಸಂಘಟನೆ ಆಯುಕ್ತರು ಶ್ರೀವೀರಭದ್ರಯ್ಯ ಪ್ರಾಸ್ತಾವಿಕ ಮಾತನಾಡಿದರು.

ಸುಲೋಚನಾ ಬೆಂಜಮಿನ್ ಡಾನ್ ಬಾಸ್ಕೊ ಸಂಸ್ಥೆಯ ಆಡಳಿತಾಧಿಕಾರಿ, ಫಾದರ್ ಸಜ್ಜಿ, ಜಿಲ್ಲಾ ಸಂಘಟನಾ ಆಯುಕ್ತ ರಾಘವೇಂದ್ರ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿ ಶ್ರೀ ಸೂಗಪ್ಪ ಪಾಟೀಲ್ ರುದ್ರೇಶ್, ರಾಜೇಂದ್ರ ಸೇರಿದಂತೆ ಇತರರು ಉಪಸ್ಥಿತರಿದ್ದರು.

## ಹಾಸನ

ದಿನಾಂಕ 08-11-2012 ರಿಂದ 10-11-2012 ರ ವರೆಗೆ ತಾಲ್ಲೂಕು ಮಟ್ಟದ ಸ್ಕೌಟ್ಸ್, ಕಬ್ಸ್, ಗೈಡ್ಸ್, ಬುಲ್ ಬುಲ್ಸ್ ರ‍್ಯಾಲಿಯನ್ನು ಏರ್ಪಡಿಸಲಾಗಿತ್ತು. 550 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ದಿನಾಂಕ 8-11-2012 ರಂದು ಅರಸೀಕೆರೆಯ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜಿನಿಂದ "ಪಥಚಲನ" ಕಾರ್ಯಕ್ರಮಕ್ಕೆ ಪಟ್ಟಣದ ಡಿ.ವೈ.ಎಸ್.ಪಿ. ಯವರಾದ ಶ್ರೀ ಐ.ಜಿ. ಮಂಜುನಾಥ್ ಚಾಲನೆ ನೀಡಿದರು. ಈ ಪಥಚಲನ ಕಾರ‍್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ನ ಮೌಲ್ಯಗಳು, ಸಾಮಾಜಿಕ ಕಳಕಳಿ ಮೂಡಿಸುವ ಭಿತ್ತಿಪತ್ರಗಳೊಂದಿಗೆ ಭಾಗಿಯಾಗಿದ್ದರು. ಉದ್ಘಾಟನಾ ಕಾರ‍್ಯಕ್ರಮದ ಅಧ್ಯಕ್ಷತೆಯನ್ನು ಶಾಸಕರಾದ ಶ್ರೀ ಕೆ.ಎಂ. ಶಿವಲಿಂಗೇಗೌಡರು ವಹಿಸಿದ್ದರು. ತಹಶೀಲ್ದಾರರಾದ ಶ್ರೀ ಬಿ.ಎ. ಜಗದೀಶ್, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಪಿ. ನಟರಾಜ್, ಹಾಸನದ ಜಿಲ್ಲಾ ಸಂಸ್ಥೆಯ ಸದಸ್ಯರುಗಳು, ಸ್ಥಳೀಯ ಸಂಸ್ಥೆಯ ಸದಸ್ಯರು ಭಾಗವಹಿಸಿದ್ದರು.

ಸಂಜೆ 6.30ಕ್ಕೆ ಶಿಬಿರಾಗ್ನಿ ಕಾರ್ಯಕ್ರಮವನ್ನು ನಡೆಸಲಾಯ್ತು. ದಿನಾಂಕ 9-11-2012 ರಂದು ಬೆಳಿಗ್ಗೆ 9.30ಕ್ಕೆ ಹೊರಸಂಚಾರಕ್ಕೆ ಕರೆದೊಯ್ಯಲಾಯ್ತು, ಮಧ್ಯಾಹ್ನ ವಿವಿಧ ಸ್ಪರ್ಧೆಗಳನ್ನು ನಡೆಸಲಾಯ್ತು. ಚಿತ್ರಕಲೆ, ರಂಗೋಲಿ, ಬೆಂಕಿ ಇಲ್ಲದೆ ಅಡುಗೆ ಮಾಡುವುದು, ಧ್ವಜಸ್ತಂಭ ನಿರ್ಮಾಣ, ಗ್ರೀಟಿಂಗ್ ಕಾರ್ಡ್ ತಯಾರಿಕೆ, ಬುಲ್ ಬುಲ್ ಟ್ರಿ ನಿರ್ಮಾಣ, ಗಾಳಿಪಟ ತಯಾರಿಕೆ, ಮುಂತಾದ ಸ್ಪರ್ಧೆಗಳಲ್ಲಿ ಸ್ಕೌಟ್ಸ್ -ಗೈಡ್ಸ್‌ಗಳು ಭಾಗವಹಿಸಿದ್ದರು.

ಸಂಜೆ 4 ಗಂಟೆಗೆ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶಾಸಕರಾದ ಶ್ರೀ ವೈ.ಎನ್. ರುದ್ರೇಶಗೌಡರು. ವಹಿಸಿದ್ದರು. ಜಿಲ್ಲಾ ಆಯುಕ್ತ (ಸ್ಕೌಟ್ಸ್) ರಾದ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತ (ಗೈಡ್ಸ್) ರಾದ ಶ್ರೀಮತಿ ಶೈಲಾ ಅಭಿನಂದನ್, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಕಾಂಚನ ಮಾಲಾ, ಕಾರ್ಯದರ್ಶಿ, ಶ್ರೀ ಮುತ್ತೇಗೌಡರು, ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ, ಎಲ್.ಟಿ. ಲೋಕೇಶ್ ರವರು ಭಾಗವಹಿಸಿದ್ದರು.

## ಉಡುಪಿ

ದಿನಾಂಕ 28-11-2012 ರಂದು ಬೈಂದೂರು ಸ್ಥಳೀಯ ಸಂಸ್ಥೆಯ ಪಟಾಲಂ ನಾಯಕರ ಮತ್ತು ಷಟ್ಕ ನಾಯಕರ ತರಬೇತಿ ಶಿಬಿರವು ವಿವೇಕಾನಂದ ಆಂಗ್ಲ ಮಾ. ಶಾಲೆ ಉಪ್ಪುಂದ ಇಲ್ಲಿ ಸಂಘಟಿಸಲಾಯಿತು. ವಿವೇಕಾನಂದ ವಿದ್ಯಾ ಸಂಸ್ಥೆಯ ಅಧ್ಯಕ್ಷ ಶ್ರೀ ಗಣೇಶ್ ಪ್ರಸನ್ನ ಮಯ್ಯ ಇವರು ಉದ್ಘಾಟಿಸಿದರು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಸೂರ್ ಭಟ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಎಂ. ಪ್ರಭಾಕರ ಭಟ್, ಜಿಲ್ಲಾ ತರಬೇತಿ ಆಯುಕ್ತ (ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ, ವೇದಿಕೆಯಲ್ಲಿ ಉಪಸ್ಥಿತರಿದ್ದು ವಿದ್ಯಾರ್ಥಿಗಳಿಗೆ ಹಿತವಚನ ನೀಡಿದರು. ಶ್ರೀ ಆನಂದ ಅಡಿಗ ಪ್ರಾಸ್ತಾವಿಕ ಭಾಷಣ ಮಾಡಿದರು. ಶಿಬಿರ ನಾಯಕರಾದ ಶ್ರೀ ವಿಜಯ ಶಿಬಿರದ ಮುನ್ನೋಟ ನೀಡಿದರು, ಶ್ರೀ ಸುಬ್ರಹ್ಮಣ್ಯ, ಸ್ಕೌಟ್ ಶಿಕ್ಷಕರು ಸ್ವಾಗತಿಸಿದರು. ಶ್ರೀ ಜಿ. ಹನುಮಂತ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಧನ್ಯವಾದ ತಿಳಿಸಿದರು. ಶಿಬಿರದ ಸಮಾರೋಪ ಸಮಾರಂಭ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ರಾಜು ದೇವಾಡಿಗ ಅವರ ಅಧ್ಯಕ್ಷತೆಯಲ್ಲಿ ಜರುಗಿತು.

ದಿನಾಂಕ : 10-12-2012 ರಿಂದ 16-12-2012 ರ ವರೆಗೆ ಜಿಲ್ಲಾ ಸಂಸ್ಥೆ ಉಡುಪಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಡಯಟ್ ಉಡುಪಿ ಇವರ ಜಂಟಿ ಆಶ್ರಯದಲ್ಲಿ ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ಮತ್ತು ಮುಂದುವರೆದ ತರಬೇತಿ ಶಿಬಿರ, ಗೈಡ್ಸ್ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರ ಮತ್ತು ರಾಜ್ಯ ಸಂಸ್ಥೆಯ ಅನುದಾನದಲ್ಲಿ ವಿಭಾಗಮಟ್ಟದ ಕಬ್ಸ್ ಶಿಕ್ಷಕರ ಪ್ರಾಥಮಿಕ ಮತ್ತು ಮುಂದುವರೆದ ತರಬೇತಿ ಶಿಬಿರವು ಉಡುಪಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಪ್ರಗತಿನಗರ ಮಣಿಪಾಲ ಉಡುಪಿಯಲ್ಲಿ ನಡೆಸಲಾಯಿತು.

ಸ್ಕೌಟ್ಸ್ ಶಿಕ್ಷಕರ ಮುಂದುವರೆದ ತರಬೇತಿಗೆ ಶ್ರೀ ಆನಂದ ಅಡಿಗ, ಎಲ್.ಟಿ.(ಎಸ್.) ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರಕ್ಕೆ ಶ್ರೀ ಎಂ. ಪ್ರಭಾರ ಭಟ್, ಎಲ್.ಟಿ.(ಎಸ್) ಗೈಡ್ಸ್ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರಕ್ಕೆ ಶ್ರೀಮತಿ

ವನಿತಾ ಎಂ. ರಾವ್, ಎಲ್.ಟಿ., ಕಬ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರಕ್ಕೆ ಶ್ರೀ ಎನ್. ಕೃಷ್ಣಮೂರ್ತಿ ಮಂಡ್ಯ, ಎ.ಎಲ್.ಟಿ., (ಕ) ಕಬ್ಸ್ ಶಿಕ್ಷಕರ, ಅಡ್ವಾನ್ಸ್ ತರಬೇತಿ ಶಿಬಿರಕ್ಕೆ ಶ್ರೀಮತಿ ರವಿಕಲಾ, ಎ.ಎಲ್.ಟಿ. (ಕ) ನಾಯಕರಾಗಿ ಕಾರ್ಯನಿರ್ವಹಿಸಿದ್ದರು. 60 ಶಿಕ್ಷಕರು ಭಾಗವಹಿಸಿದ್ದರು.

ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತ (ಸ್ಕೌ) ರವರ ಅಧ್ಯಕ್ಷತೆಯಲ್ಲಿ ಶಿಬಿರದ ಸಮಾರೋಪ ಸಮಾರಂಭ ಜರುಗಿತು. ಶ್ರೀ ಪಿ. ರವೀಂದ್ರ ನಾಯಕ್ ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ ಉಡುಪಿ ಹಾಗೂ ಶ್ರೀ ಸಿ. ಎಸ್. ರೆಡ್ಡಿ, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಕೊಗ್ಗ ಗಾಣಿಗ ಸ್ವಾಗತಿಸಿದರು. ಶ್ರೀ ಆನಂದ ಅಡಿಗ, ಶಿಬಿರದ ವರದಿ ನೀಡಿದರು, ಶ್ರೀ ಶೇಖರ ಪೂಜಾರಿ, ಜಿಲ್ಲಾ ಕಾರ್ಯದರ್ಶಿ ಧನ್ಯವಾದ ನೀಡಿದರು. ಶ್ರೀಮತಿ ವನಿತಾ ಎಂ. ರಾವ್, ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಕಾರ್ಯಕ್ರಮ ನಿರ್ವಹಿಸಿದರು.

ದಿನಾಂಕ 30–11–2012 ಭಾರತ್ ಸ್ಕೌಟ್ಸ್ – ಗೈಡ್ಸ್ ಸ್ಥಳೀಯ ಸಂಸ್ಥೆ ಕುಂದಾಪುರ ಮತ್ತು ಕೊಂಚಾಡಿ ರಾಧಾ ಶೆಣೈ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಖಾರ್ವಿಕೇರಿ ಗಂಗೊಳ್ಳಿ ಇವರ ಜಂಟಿ ಆಶ್ರಯದಲ್ಲಿ ಕುಂದಾಪುರ ವಲಯದ ಭಾರತ್ ಸ್ಕೌಟ್ಸ್ – ಗೈಡ್ಸ್ ಪಟಾಲಂ–ಷಟ್ಕ ನಾಯಕರ ತರಬೇತಿ ಶಿಬಿರ ಶುಕ್ರವಾರ ಗಂಗೊಳ್ಳಿ ಖಾರ್ವಿಕೇರಿಯ ಕೊಂಚಾಡಿ ರಾಧಾ ಶೆಣೈ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಜರುಗಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಅಧ್ಯಕ್ಷೆ ಗುಣರತ್ನ ವಹಿಸಿದ್ದರು.

ಗಂಗೊಳ್ಳಿ ಗ್ರಾ. ಪಂ. ಅಧ್ಯಕ್ಷೆ ಶ್ರೀಮತಿ ಸಾಕಮ್ಮ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಗ್ರಾ. ಪಂ. ಸದಸ್ಯ ಶ್ರೀ ಬಿ. ರಾಘವೇಂದ್ರ ಪೈ, ಸ್ಥಳೀಯ ಸಂಸ್ಥೆಗಳ ಉಪಾಧ್ಯಕ್ಷ, ಕೆ.ಆರ್. ನಾಯ್ಕ್ ದಿನಕರ ಪಟೇಲ್, ಕೊಂಚಾಡಿ ರಾಧಾ ಶೆಣೈ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಸುಜಾತಾ ಕೆ. ಶುಭಾಂಶಸನೆಗೈದರು. ಸ್ಕೌಟ್ ಮತ್ತು ಗೈಡ್ ಸ್ಥಳೀಯ ಸಂಸ್ಥೆಗಳ ಸ್ಥಾನೀಯ ಆಯುಕ್ತ ಶ್ರೀ ಆನಂದ ಅಡಿಗ, ಬೈಂದೂರು ವಲಯದ ಮಾಜಿ ಕಾರ್ಯದರ್ಶಿ ಪಿ. ನರಸಿಂಹಮೂರ್ತಿ. ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ಅಧ್ಯಕ್ಷ ನಾಗರಾಜ ಖಾರ್ವಿ, ಕೊಂಕಣ ಖಾರ್ವಿ ಸಮಾಜದ ನಿರ್ದೇಶಕ ಶ್ರೀ ವೆಂಕಟೇಶ್ವ ಕೋಟ್ಯಾನ್, ಸ್ಥಳ ದಾನಿ ಶ್ರೀ ಮೋಹನದಾಸ ಕಾನೋಜಿ ಶಿಬಿರದ ನಾಯಕ ರಾಜೇಶ್ ಮೊದಲಾದವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಶ್ರೀ ಕೆ. ಎಸ್. ಮಂಜುನಾಥ ಸ್ವಾಗತಿಸಿದರು, ಆನಂದ ಅಡಿಗ ಪ್ರಸ್ತಾವಿಸಿದರು. ನಾಗರಾಜಶೆಟ್ಟಿ ಕಾರ್ಯಕ್ರಮ ನಿರೂಪಿಸಿ, ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿ ಆನಂದ ಪೂಜಾರಿ ವಂದಿಸಿದರು.

## ಧಾರವಾಡ

ದಿನಾಂಕ 03–12–2012 ರಿಂದ 6–12–2012 ರ ವರೆಗೆ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ನಡೆದ ಜಿಲ್ಲಾ ಮಟ್ಟದ ಕಬ್ಸ್ ಮತ್ತು ಬುಲ್ ಬುಲ್‌ಗಳ ಪದಕ ಸಿದ್ಧತಾ ಶಿಬಿರದಲ್ಲಿ 250 ಕಬ್ಸ್–ಬುಲ್ ಬುಲ್‌ಗಳು ಭಾಗವಹಿಸಿದ್ದರು. ದಿನಾಂಕ 6–12–2012 ರಂದು ನಡೆದ ಸಮಾರೋಪ ಸಮಾಂಭದಲ್ಲಿ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಎಂ.ಎಂ. ಲೋಂಡೆ ಜಿಲ್ಲಾ ಪ್ರಧಾನ ಆಯುಕ್ತರು ಹಾಗೂ ಶ್ರೀ ವ್ಹಿ. ವ್ಹಿ. ಕಟ್ಟಿ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎಸ್.ವ್ಹಿ. ಮೊರಬ, ಸ್ಥಾನಿಕ ಆಯುಕ್ತರು ಶ್ರೀಮತಿ ಪ್ರಭಾ ಲೋಂಡೆ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಶ್ರೀಮತಿ ಪ್ರೇಮಾ ಮಂಗಳೂರು, ಜಿಲ್ಲಾ ಗೈಡ್ ತರಬೇತಿ ಆಯುಕ್ತರು ಭಾಗವಹಿಸಿದ್ದರು.

ದಿನಾಂಕರ 31–10–2012 ರಂದು ಮಾಜಿ ಪ್ರಧಾನಿ ಇಂದಿರಾ ಗಾಂಧಿಯವರ ಪುಣ್ಯತಿಥಿಯಂದು ರಾಷ್ಟ್ರೀಯ ಸಂಕಲ್ಪ ದಿನವನ್ನಾಗಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಆಚರಿಸಲಾಯಿತು. ಇದೇ ಸಂದರ್ಭದಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಸ್ಕೌಟ್ಸ್ ಗೈಡ್ಸ್‌ಗಳಿಂದ ಸರ್ವಧರ್ಮ ಸಮನ್ವಯ ಪ್ರಾರ್ಥನೆ ನಡೆಯಿತು.

ಅಪರ ಜಿಲ್ಲಾಧಿಕಾರಿ ಶ್ರೀ ಮಹಾಂತೇಶ ಬೀಳಗಿ ಕಾರ್ಯಕ್ರಮ ಉದ್ಘಾಟಿಸಿ ಜಾತಿ, ಧರ್ಮ, ಪ್ರದೇಶ ಮತ ಅಥವಾ ಭಾಷೆಯ ಭೇದ ಭಾವವಿಲ್ಲದ ಭಾರತದ ಎಲ್ಲ ಜನತೆಯ ಭಾವೈಕ್ಯತಾ ಸೌಹಾರ್ದಕ್ಕಾಗಿ ಕಾರ್ಯ ನಿರ್ವಹಿಸುತ್ತೇವೆಂದು ಪ್ರತಿಜ್ಞಾ, ವಿಧಿ ಬೋಧಿಸಿದರು.

ಕಾರ್ಯಕ್ರಮದಲ್ಲಿ ಶ್ರೀಮತಿ ಪ್ರಭಾ ಲೋಂಡೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಪ್ರೇಮಾ ಮಂಗಳೂರು, ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕ ಶ್ರೀ ಬಿ.ಡಿ. ಹಿರೇಗೌಡರ, ಜಿಲ್ಲಾ-ಸಂಸ್ಥೆಯ ಪದಾಧಿಕಾರಿಗಳು ಹಾಗೂ ಸ್ಥಳೀಯ ಸ್ಕೌಟರ್ಸ್ ಗೈಡರ್ಸ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಉಪಸ್ಥಿತರಿದ್ದರು.

## ದಕ್ಷಿಣ ಕನ್ನಡ

ದಿನಾಂಕ 1-12-2012 ರ ಕನ್ನಡ ರಾಜ್ಯೋತ್ಸವ ದಿನದಂದು ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್ ಗೈಡ್ಸ್ ಭವನ ಲಾಲ್‌ಬಾಗ್ ಇಲ್ಲಿಂದ ನೆಹರು ಮೈದಾನದ ವರೆಗೆ ನಡೆದ "ಪ್ಲಾಸ್ಟಿಕ್ ಮುಕ್ತ ಮಂಗಳೂರು" ಎಂಬ ಜಾಥಾದಲ್ಲಿ ಮಂಗಳೂರಿನ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿದರು. ಪ್ಲಾಸ್ಟಿಕ್ ಬಗ್ಗೆ ಸ್ಲೋಗನ್ ಇರುವ ಭಿತ್ತಿ ಪತ್ರವನ್ನು ಹಿಡಿದು ಸಾಗಿದರು. ಇವರೊಂದಿಗೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿ, ಖಜಾಂಚಿ ಶ್ರೀ ವಾಸುದೇವ ಬೋಳೂರ ಗೈಡ್ ಆಯುಕ್ತರಾದ ಶ್ರೀ ಐರಿನ್ ಡಿ 'ಕುನ್ಹ, ಜಿಲ್ಲಾ ಕಾರ್ಯದರ್ಶಿ ಶ್ರೀ ಸಂತೋಷ್ ಹಾಗು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

************

ದಿನಾಂಕ 1-12-2012 ಮತ್ತು 2-12-2012 ರಂದು ಮಂಗಳೂರು ನಗರದ ಎಸ್.ಎಂ. ಕುಶೆ ಹಾಗೂ ಬೆಸೆಂಟ್ ವಿದ್ಯಾ ಸಂಸ್ಥೆಯ ರೋವರ್ಸ್ ರೇಂಜರ್ಸ್‌ಗಳು ಪಿಲಿಕುಳ ನಿಸರ್ಗಧಾಮದ ಪ್ರಾಣಿ ಸಂಗ್ರಹಾಲಯ, ಹಾಗೂ ಉದ್ಯಾನವನದಲ್ಲಿ ಸಂದರ್ಶನಕ್ಕೆ ಬರುವ ಜನರಿಗೆ ಮನವರಿಕೆ ಆಗುವಂತೆ "ಪ್ಲಾಸ್ಟಿಕ್ ಮುಕ್ತ" ಗೊಳಿಸುವ ನಿಟ್ಟಿನಲ್ಲಿ ಭಿತ್ತಿ ಪತ್ರವನ್ನು ಸಾಲಾಗಿ ಹಿಡಿದು ನಿಂತು ಜನರಿಗೆ ತಿಳಿಯಪಡಿಸಿದರು.

********************

ದಿನಾಂಕ : 12-12-2012 ರಂದು 150ನೇ ವಿವೇಕಾನಂದರ ಜಯಂತ್ಯೋತ್ಸವ ಸಂದರ್ಭದಲ್ಲಿ ಮಂಗಳೂರು ನಗರದ ವಿವಿಧ ಕಾಲೇಜ್‌ಗಳ ರೋವರ್ ರೇಂಜರ್ಸ್‌ಗಳಿಗೆ ಎಸ್. ಎಂ. ಕುಶೆ ವಿದ್ಯಾ ಸಂಸ್ಥೆಯಲ್ಲಿ ಮಾನವನಿಂದ ಹಾಗೂ ಪ್ರಕೃತಿಯಿಂದ ಆಗುವ ವಿಕೋಪಗಳಿಗೆ ಪರಿಹಾರ ಹಾಗೂ ಆಗ ನಮ್ಮ ಸಹಕಾರದ ಬಗ್ಗೆ ರೆಡ್ ಕ್ರಾಸ್ ಸಂಸ್ಥೆಯ ಸಂತೋಷ. ನಿತೀನ್, ಶರತ್ ರವರಿಂದ ಪ್ರಾತ್ಯೇಕ್ಷಿಕೆಯೊಂದಿಗೆ ಕಾರ್ಯಾಗಾರವನ್ನು ನಡೆಸಲಾಯಿತು. ಇದೆ ಸಂದರ್ಭದಲ್ಲಿ SAY NO TO!!! smoking, alcohol, drugs, ಸ್ಲೋಗನ್ ಇರುವ ಕಾರ್ಡ್‌ಗಳನ್ನು ಕಾಲೇಜ್ ಪ್ರಾಂಶುಪಾಲರಾದ ಶ್ರೀ ಕೆ.ಕೆ. ಉಪಾಧ್ಯಾಯರು, ರೋವರ್ ರೇಂಜರ್ಸ್‌ಗೆ ನೀಡಿ ಮನೆಗಳಿಗೆ ತಲುಪಿಸುವಂತೆ ತಿಳಿಸಿದರು. ರೋವರ್ ಲೀಡರ್ ಪ್ರತೀಮ್ ಕುಮಾರ್, ಕಾರ್ಯಕ್ರಮ ಸಂಯೋಜಿಸಿದರು, ಸ್ಕೌಟರ್ ಸುರೇಖ ಹಾಗೂ ರೆಡ್ ಕ್ರಾಸ್ ಸಂಸ್ಥೆಯ ಸಂತೋಷ್ ಸಹಕರಿಸಿದರು.

# Bangalore North

Shivajinagar Local Association Organised Special Annual Rally and closing ceremony of Centenary Celebration of Guiding on 8th December 2012 at Goodwill Girls High School Coles Park, Bangalore.

Nearly 250 Cubs, Bulbuls, Scouts -Guides and 25 Unit Leaders participated in the event.

Sri Kondajji B. Shanmukhappa, State Chief Commissioner Inaugurated the Event. Sri T.S. Lucas, State Commissioner (Scouts) Sri M.A. Khalid, State secretary were present.

Miss P. Saroja, Asst. State Commissioner (Guides), Smt. Vani Mohan, Principal, Good will Girls High School, Dr. S.A Kiribananda, ADC., Sr. Jessie, ADC and Sri B. K. Seshadri District Secretary were also present.

Sri M.A. Khalid State Secretary Sr. Josephine Hoover, Former Vice-President Smt. Rita Praceilla, ALT(BB) and Nirmala Prakash, Former Vice President were Felicitate. Wedding Photograph of Lord B.P. and Lady B.P. was released by Sri Kondajji B. Shanmukhappa, SCC. on the occasion of 100 years of wedding Anniversary of B.P. and Lady B.P.

Smt. B. Revathi L.T. (B.B./Dist Training Commission (G) Bangalore North Co-ordinated the programme Assisted by Sri Vishwanath Kokade, Jt. Secretary and Sri GunaSheela, Asst. Secretary.

*************

Yelahanka Local Association, Bangalore North had organised a Badge work camp with the theme "Nurture the Nature" at Sindhi High School on November 17th 2012 . Around 250 Scouts & Guides participated from three schools. The inagural function was presided over by Mr. B.K. Seshadri, District Secretary. Many children exhibited their models on topics like safe dringking water, water conservation methods and waste management, which was followed by power point presentation on the topics. We had eminent people like Dr. Meenakshi Bharat creating awareness regarding the importance of segregation of wastes, practically learning to prepare compost from garden wastes and Mr. Karan from Rain Club divulging technical facts about Rain Water harvesting. They also had a brief session on songs, log books and drawing.

...............ಹಿಂದಿನ ಸಂಚಿಕೆಯಿಂದ

# ಅಧ್ಯಾಯ – 3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ–9

## ಶಿಬಿರ ಕೌಶಲ್ಯ (CAMP CRAFT)

### ಶಿಬಿರದಲ್ಲಿ ಸೌಖ್ಯ – ಆವರಣ – ಶಿಬಿರ ಸರಂಜಾಮು – ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು – ಶಿಬಿರವನ್ನು ಚೊಕ್ಕಟವಾಗಿಡುವುದು.

**ಶಿಬಿರದಲ್ಲಿ ಸೌಖ್ಯ**

ಶಿಬಿರಗಳಲ್ಲಿ ಬಹಳ ತೊಂದರೆಯಾಗುತ್ತದೆ ಮತ್ತು ಕಷ್ಟಪಡಬೇಕಾಗುತ್ತದೆ ಎಂದು ಕೆಲವರ ಅಭಿಪ್ರಾಯ. ನಿಜ ಹೇಳುವುದಾದರೆ, ಪ್ರವೇಶ ಸ್ಕೌಟ್‌ಗೆ ಅದು ಕಷ್ಟಕರವಾಗಿ, ಅಹಿತಕರವಾಗಿ ತೋರಬಹುದು. ನುರಿತ ಸ್ಕೌಟ್‌ಗೆ ಶಿಬಿರದಲ್ಲಿ "ಕಷ್ಟ" ಎಂಬ ಪದಕ್ಕೆ ಅರ್ಥವಿಲ್ಲ. ಅವನಿಗೆ ತನ್ನನ್ನು ತಾನು ನೋಡಿಕೊಳ್ಳಲು ಬರುತ್ತದೆ. ಎಂತಹ ವೇಳೆಯಲ್ಲಿಯೂ ತಾನು ಸೌಖ್ಯವಾಗಿರಬಲ್ಲ. ಅವನಿಗೆ ಗುಡಾರವು ದೊರಕದಿದ್ದರೆ ನಡುಗುವುದು, ಗೊಣಗುವುದು ಮಾಡುವುದಿಲ್ಲ. ಬದಲಿಗೆ ತನಗೆ ಬೇಕಾದ ಆಸರೆ/ಗುಡಿಸಲನ್ನು ತಯಾರಿಸಿಕೊಳ್ಳಲು ಮೊದಲು ಮಾಡುತ್ತಾನೆ. ಅದಕ್ಕಾಗಿ ಬಿರುಗಾಳಿ, ಮಳೆಗಾಲದ ಕಾಲದಲ್ಲಿ, ಜಲಮಯವಾಗದಂತಿರುವ ಸ್ಥಳವನ್ನು ಆರಿಸಿಕೊಳ್ಳುತ್ತಾನೆ.

ಗುಡಾರದ ಎದುರಿಗೆ ಶಿಬಿರಾಗ್ನಿಯನ್ನು ಹಚ್ಚಿಕೊಂಡು ಹಾಯಾಗಿ ಇರುತ್ತಾನೆ. ಮಲಗಲು ಹುಲ್ಲು ಎಲೆಗಳಿಂದ ಬೆಚ್ಚನೆಯ, ಮೆತ್ತಗಿನ, ಹಾಸಿಗೆಯನ್ನು ತಯಾರಿಸಿಕೊಳ್ಳುತ್ತಾನೆ.

ನುರಿತ ಸ್ಕೌಟು, ಎಲ್ಲ ವೇಳೆಗಳಲ್ಲಿಯೂ "ಉಪಾಯಕುಶಲತೆ" (Resourceful) ಯನ್ನು ಹೊಂದಿರುತ್ತಾನೆ. ಎಂತಹುದೇ ಕಷ್ಟ ಒದಗಿದರೂ, ಅಸೌಖ್ಯವೆನಿಸಿದರೂ, ಅದರಿಂದ ತೊಂದರೆಯಾಗದಂತೆ ನೋಡಿಕೊಳ್ಳುತ್ತಾನೆ.

**ಆವರಣ**

ಶಿಬಿರಕ್ಕೆ ಹೋಗಬೇಕೆಂದುಕೊಂಡಾಗ, ಎಲ್ಲಿ ಶಿಬಿರ ಹೂಡಬೇಕು? ಆ ಶಿಬಿರವು ಯಾವು ರೀತಿಯದಾಗಿರ ಬೇಕು? ಎಂಬ ವಿಷಯಗಳನ್ನು ಮೊದಲು ತೀರ್ಮಾನ ಮಾಡಿಕೊಳ್ಳಬೇಕು.

ಮನೆಯಿಂದ ಹತ್ತಿರದ ಸ್ಥಳವಾದರೆ, ಪ್ರಯಾಣದ ಖರ್ಚು ಕಡಿಮೆ ಆಗುತ್ತದೆ.

ನನ್ನ ಅಭಿಪ್ರಾಯದಲ್ಲಿ ಸ್ಥಳವು ವನಪ್ರದೇಶದ ಮಧ್ಯೆ ಅಥವ ವನ ಪ್ರದೇಶದ ಬಳಿ ಇರಬೇಕು.

ಪ್ರತಿದಿನವೂ ದಿನದ ಕೊನೆಯಲ್ಲಿ ವಿಶ್ರಮಿಸಲು, ನಿಮ್ಮ ಗುಡಾರಗಳನ್ನು ಹಾಕಿಕೊಳ್ಳಲಾಗಲೀ, ಅಥವಾ ಕ್ಷೇತ್ರದ ಯಾವುದಾದರೂ ಕಟ್ಟಡವನ್ನು ಉಪಯೋಗಿಸಲಾಗಲೀ, ಪೂರ್ವಭಾವಿಯಾಗಿ ಅನುಮತಿ ಪಡೆದಿರಬೇಕು. ವರ್ಷಋತು, ಶರದೃತುಗಳಲ್ಲಂತೂ (ಮಳೆಗಾಲ, ಚಳಿಗಾಲ) ಇದು ಅನಿವಾರ್ಯವಾಗುತ್ತದೆ.

**ಗುಡಾರಗಳು**

ನಿಮಗೆ ಯಾವ ರೀತಿಯ ಗುಡಾರಬೇಕು ಎಂದು ಯೋಚಿಸುವುದಕ್ಕೆ ಮುಂಚೆ, ನಿಮ್ಮದು ಸ್ಥಾಯಿ ಶಿಬಿರವೇ? ಎಂಬುದನ್ನು ನಿರ್ಧರಿಸಿ.

ಸ್ಥಾಯೀ ಶಿಬಿರವಾದರೆ, ನನ್ನ ಅಭಿಪ್ರಾಯದಲ್ಲಿ ಪರಿಶೋಧಕರು ಉಪಯೋಗಿಸುವ, ಬೆನ್ನುಮರ ಗುಡಾರ (Ridge Tent) ಅಥವಾ ಗೋಡೆ ಗುಡಾರ (Wall Tent) ಗಳನ್ನು ಉಪಯೋಗಿಸಬಹುದು. ಶಿಬಿರವು ಅಂದವಾಗಿಯೂ ಪೂರಾ ಹಿತಕರವಾಗಿಯೂ ಇದ್ದರೆ ಅವುಗಳ ಸಮ ಬೇರೆ ಯಾವುದೂ ಬರುವುದಿಲ್ಲ. ಗುಡಾರಗಳಿಗೆ ಹೊರ ಹೊಚ್ಚು (Fly sheet) ಇದ್ದರೆ, ಅದು ನೀರು ಹೀರುವುದಿಲ್ಲವಾದ ಕಾರಣ, ತೇವಾಂಶವನ್ನು ತನ್ನಲ್ಲಿ ಹಿಡಿದು ಒಳಗೆ ಒದ್ದೆ ಆಗದಂತೆ ಕಾಪಾಡುತ್ತದೆ. ಗುಡಾರದ ಒಳಗೆ ಬೇಸಗೆಯಲ್ಲಿ ತಣ್ಣಗೂ, ಚಳಿಹವೆಯಲ್ಲಿ ಬೆಚ್ಚಗೂ ಇರುವಂತೆ ಈ ಹೊರಹೊಚ್ಚು ಕಾಪಾಡುತ್ತದೆ.

ಸಣ್ಣ ಗುಡಾರಗಳೂ ಸಹ (ಇಬ್ಬರು ಅಥವಾ ಹೆಚ್ಚುಮಂದಿ ಇರುವ ಪೆಟ್ರೋಲುಗಳಿಗೆ) ಶಿಬಿರಕ್ಕೆ ಅನುಕೂಲಕರ ವಾಗಿರುತ್ತದೆ.

.........................ಮುಂದುವರೆಯುತ್ತದೆ.



SCOUTS

Creating a Better World

World Organization of the Scout Movement
Asia-Pacific Region



## ASIA-PACIFIC REGIONAL AWARD FOR DISTINGUISHED SERVICE

*presented to*



# *Mohammed Ali Khalid*

*in recognition of his outstanding leadership and invaluable contribution towards the promotion and development of Scouting.*

*Given this 29th day of November 2012, in Dhaka, Bangladesh.*

**Abdullah Rasheed**
Regional Director
WOSM/Asia-Pacific Region

**Jejomar C Binay**
Chairman
Asia-Pacific Regional Scout Committee

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




We are what our thoughts have made us; so take care about what you think. Words are secondary. Thoughts live; they travel far.

- Swami Vivekananda




**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-೫೬೦ ೦೦೨
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು

# ಉದ್ಯಾನಗಳು ನಗರದ ಶ್ವಾಸಕೋಶಗಳು...
# ...ಅವುಗಳನ್ನು ಚೊಕ್ಕಟವಾಗಿಡಿ





ಸಾರ್ವಜನಿಕ ಹಿತಾಸಕ್ತಿಯಿಂದ ಪ್ರಕಟ:



**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**

ಟಿ. ಚೌಡಯ್ಯ ರಸ್ತೆ. ಕುಮಾರಪಾರ್ಕ್ ಪಶ್ಚಿಮ, ಬೆಂಗಳೂರು - 560 020

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 31-12-2012 (No. of Pages : 4 + 24 = 28)



ಧಾರವಾಡ ಜಿಲ್ಲಾ ಸಂಸ್ಥೆಯ ವತಿಯಿಂದ 3-12-2012 ರಿಂದ 6-12-2012ರವರೆಗೆ ನಡೆದ ಕಬ್ಸ್ ಮತ್ತು ಬುಲ್‌ಬುಲ್ಸ್ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್ ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು.



JOTA-JOTI ಚಟುವಟಿಕೆಯಲ್ಲಿ ಭಾಗವಹಿಸಿರುವ ದಾವಣಗೆರೆಯ ಗೈಡ್‌ಗಳು.



ದಿನಾಂಕ 08-11-2012 ರಿಂದ 10-11-2012ರವರೆಗೆ ನಡೆದ ಹಾಸನ ಜಿಲ್ಲೆ ಅರಿಸೀಕೆರೆ ತಾಲ್ಲೂಕು ಮಟ್ಟದ ರ್‍ಯಾಲಿಯ ಪಥಚಲನದಲ್ಲಿ ಭಾಗವಹಿಸಿದ ಕಬ್ಸ್-ಬುಲ್‌ಬುಲ್ಸ್ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು.



ದಿ. 8-12-2012ರಂದು ಚಿಕ್ಕಮಗಳೂರಿನ ಸೆಂಟ್‌ಮೇರಿಸ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಚಾರಣ ಹಾಗೂ ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಿರುವುದು.



ದಿನಾಂಕ 1-11-2012 ರಂದು ಮಂಗಳೂರಿನಲ್ಲಿ ನಡೆದ "ಪ್ಲಾಸ್ಟಿಕ್ ಮುಕ್ತ ಮಂಗಳೂರು" ಜಾಥಾದಲ್ಲಿ ಭಾಗವಹಿಸಿದ ರೋವರ್ಸ್-ರೆಂಜರ್ಸ್‌ಗಳು.



ಶಿವಮೊಗ್ಗಜಿಲ್ಲೆ ಬೇಗುವಳ್ಳಿ ಗ್ರಾಮದ ಸ್ಕೌಟ್-ಗೈಡ್ಸ್‌ಗಳಿಂದ ಸಮುದಾಯ ಸೇವಾ ಶಿಬಿರ.



**SCOUTS**
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase,
West of Chord Road
Mahalakshmipuram, Bangalore-560086.

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore - 560 026**